# ಯದುಪತಿ

## (ಆತ್ಮವಿಕಾಸ)

೧

ಶ್ರೀ. ಸಾಲಿ ರಾಮಚಂದ್ರರಾಯರು

ಮುನ್ನುಡಿಯ ಲೇಖಕರು :

ಶ್ರೀ. ರಂಗಾಚಾರ್ಯ ಜಾಹಗಿರದಾರ
ಉಪಕುಲಪತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಕರ್ನಾಟಕ ಪ್ರಾಗತಿಕ ಶಿಕ್ಷಣ ಸಂಘ,
ಮುಂಬಯಿ

೧೯೫೨ ]

1-4-0
[೨-೦-೦

# ಎರಡು ಮಾತುಗಳು.

ಯದುಪತಿಗೆ ನಾನು ಮುನ್ನುಡಿಯನ್ನು ಬರೆಯಬೇಕೆಂದು ಶ್ರೀ. ಸಾಲಿ ರಾಮಚಂದ್ರರಾಯರು ನನ್ನನ್ನು ಕೇಳಿದಾಗ ನನಗೆ ಆಶ್ಚರ್ಯವೆನಿಸಿತು. ಸಾಹಿತ್ಯವು ನನ್ನ ಕ್ಷೇತ್ರವಲ್ಲ. ಇಂತಹ ನನ್ನಿಂದ ಮುನ್ನುಡಿಯನ್ನು ಬರೆಯಿಸಿಕೊಳ್ಳುವ ಔಚಿತ್ಯವೇನೆಂಬುದು ನನಗೆ ಸರಿಯಾಗಿ ಗೊತ್ತಾಗಲಿಲ್ಲ. ಆದರೂ, 'ನೀವು ನನ್ನ ಕಡೆಗೆ ಪುಸ್ತಕವನ್ನು ಕಳಿಸಿಕೊಡಿರಿ. ಅದನ್ನು ಓದಿದ ಬಳಿಕ ನಾನು ಎರಡು ಶಬ್ದಗಳನ್ನು ಬರೆವೆನೋ ಹೇಗೆಂಬುದನ್ನು ತಿಳಿಸುವೆನು,' ಎಂದು ಹೇಳಿದೆನು. ಪುಸ್ತಕವನ್ನು ಓದಿದ ಮೇಲೆ ಸಾಲಿಯವರು ನನ್ನನ್ನು ಏಕೆ ಕೇಳಿದರೆಂಬುದು ಸ್ಪಷ್ಟವಾಯ್ತು. ಶ್ರೀ. ಸಾಲಿ ರಾಮಚಂದ್ರರಾಯರು ಮತ್ತು ನಾನು ೧೯೦೩ ರಿಂದ ೧೯೦೭ರ ವರೆಗೆ ವಿಜಾಪುರದಲ್ಲಿ ಇಂಗ್ಲಿಶ್ ಮೂರನೆಯ ಇಯತ್ತೆಯಿಂದ ಮ್ಯಾಟ್ರಿಕಿನವರೆಗೆ ಕೂಡಿಯೆ ಕಲಿತೆವು. ಒಬ್ಬರೊಬ್ಬರಲ್ಲಿ ಪ್ರೀತಿವಿಶ್ವಾಸವುಳ್ಳವರಾಗಿದ್ದೆವು. ನಾನು ಕಾಲೇಜಿನಲ್ಲಿ ಇದ್ದಾಗಲೂ ಅವರು ನನ್ನ ಕೋಣೆಯಲ್ಲಿ ನನ್ನೊಡನೆ ಒಂದೆರಡು ವರ್ಷ ಇದ್ದರು. ಮುಂದೆಯೂ ನಮ್ಮಿಬ್ಬರ ಕಾರ್ಯಕ್ಷೇತ್ರಗಳು ಬೇರೆ ಬೇರೆ ಯಾಗಿದ್ದರೂ ನಮ್ಮ ಮಿತ್ರತ್ತ್ವವು ಅಭಾದಿತವಾಗಿ ಉಳಿಯಿತಷ್ಟೇ ಅಲ್ಲ, ಪರಿಪಕ್ವವಾಯ್ತು. ಹೀಗಾಗಿ ಸಾಲಿಯವರ ಜೀವನದ ಯಾವ ಅಂಶವೂ ನನಗೆ ಗೊತ್ತಾಗದೆ ಉಳಿದಿಲ್ಲ.

'ಯದುಪತಿ' ಸಾಲಿಯವರ ಆತ್ಮಚರಿತ್ರವೆಂದು ಹೇಳಲು ಬಾರದಿದ್ದರೂ ಅವರು ತಮಗೆ ಬಂದ ಅನುಭವಗಳನ್ನು 'ಯದುಪತಿ'ಯ ಮುಖಾಂತರವಾಗಿ ಪ್ರಕಟಿಸಿರುವರೆಂದು ಹೇಳಲು ಅಡ್ಡಿಯಿಲ್ಲ. ಗ್ರಂಥಕರ್ತನು ತನ್ನ ಕೃತಿಗಳ ಮುಖಾಂತರವಾಗಿ ತನ್ನನ್ನೇ ತೋರಿಸಿಕೊಳ್ಳುವನು (reveals himself) ಎಂಬುದು ಬಹುಮಟ್ಟಿಗೆ ಸತ್ಯವಿದೆ. ಯದುಪತಿಯ ಸುತ್ತಾಡುವ ಭಟ್ಟರು, ಬೀರಣ್ಣ, ಸಾವಕ್ಕ, ಆಚಾರ್ಯರು, ಶೇಷಗಿರಿರಾಯರು, ಶಾರದಾಬಾಯಿ ಕಲ್ಪಿತ ಪಾತ್ರಗಳಾಗಿದ್ದರೂ ಯದುಪತಿ ಮಾತ್ರ ಸಾಲಿಯವರ ಭಾವನೆಗಳನ್ನು, ಅನುಭವಗಳನ್ನು ಮತ್ತು ಧ್ಯೇಯಗಳನ್ನು ವಾಚಕರ ಮುಂದೆ ಇಟ್ಟಿದ್ದಾನೆಂದು ವಿಶ್ವಾಸದಿಂದ ಹೇಳಬಹುದು. ನಾನು ಸಾಲಿಯವರನ್ನು ಮೊದಲು ಕಂಡುದು ೧೯೦೩ರಲ್ಲಿ. ಆಗಲೇ ಅವರು ತಂದೆತಾಯಿಗಳನ್ನು ಕಳೆದುಕೊಂಡು ಅನಾಥರಾಗಿದ್ದರು. ಅವರಿಗೆ ಸಾಹಾಯ್ಯವೀವ ಆಪ್ತೇಷ್ಟರೂ ಯಾರೂ ಇರಲಿಲ್ಲ. ಯದುಪತಿಯಂತೆ

ಓಂ ಭವತಿ ಭಿಕ್ಷಾಂ ದೇಹಿ ಎಂದು ಮಾಧುಕರಿಯನ್ನು ಮಾಡದಿದ್ದರೂ ಅವರು ವಾರಹಚ್ಚಿಕೊಂಡು ಸಮಾಜವನ್ನು ಪಿತೃಸ್ಥಾನದಲ್ಲಿ ಇಟ್ಟುಕೊಂಡು ತಮ್ಮ ಅಭ್ಯಾಸವನ್ನು ಸಾಗಿಸುತ್ತಿದ್ದರು. ವಾರದ ಎಲ್ಲ ದಿವಸಗಳು ದೊರೆಯದಿದ್ದುದರಿಂದ ಅವರಿಗೆ ಆಗಾಗ ಉಪವಾಸದ ಪ್ರಸಂಗಗಳು ಬರುತ್ತಿದ್ದುವು. ಅವರು ಉಪವಾಸವಿದ್ದುದು ಮಿತ್ರರಾದ ನಮಗೂ ಹಿಂದಿನಿಂದ ಹೇಗೊ ಗೊತ್ತಾಗುತ್ತಿದ್ದಿತು. ತಾವಾಗಿಯೆ ಬಾಯಿಬಿಚ್ಚಿ ಅವರು ಎಂದೂ ಹೇಳುತ್ತಿರಲಿಲ್ಲ. ಬೀರಣ್ಣ, ಭಟ್ಟರು, ಆಚಾರ್ಯರು, ಪುರುಷೋತ್ತಮರಾಯರು ಯದುಪತಿಯನ್ನು ಮಗನಂತೆ ನೋಡಿಕೊಳ್ಳುತ್ತಿ ಅವನ ಜೀವನದಲ್ಲಿ ಸುಖವನ್ನು ತುಂಬಿ ವಿದ್ಯಾರ್ಜನೆಯ ಕಾರ್ಯದಲ್ಲಿ ಅವನಿಗೆ ನೆರವಾದರು. ಸಾಲಿಯವರ ಜೀವನದಲ್ಲಿ ಇಂತಹರಾರೂ ಅವರ ವಿದ್ಯಾರ್ಥಿದಶೆಯ ಆಯುಷ್ಯದಲ್ಲಿ ಸುಖವನ್ನು ಬೆರೆಯಿಸಲಿಲ್ಲ. ಮಿತ್ರರು ಕೆಲವರು ಪ್ರಸಂಗವಶಾತ್ ಅಲ್ಪಸ್ವಲ್ಪ ಹಣವನ್ನು ಒದಗಿಸಿ ಅವರಿಗೆ ಸಾಹಾಯ್ಯವನ್ನು ಮಾಡಿರಬಹುದು, ಸಹಾನುಭೂತಿಯನ್ನು ತೋರಿಸಿರಬಹುದು. ಆದರೆ ಯದುಪತಿಗೆ ದೊರೆತ ಭಾಗ್ಯ ಅವರಿಗೆ ದೊರೆಯಲಿಲ್ಲವೆಂದು ನಾನು ಖಂಡಿತವಾಗಿ ಹೇಳಬಲ್ಲೆ. ಸಾಲಿಯವರು ವಿದ್ಯಾರ್ಥಿಯಾಗಿರುವಾಗ ಸಮಾಜವು ಅವರ ಕಷ್ಟಗಳನ್ನು ನೀಗಿಸುವುದಕ್ಕಾಗಿ ವಿಶೇಷವಾಗಿ ಆಸ್ಥೆಯನ್ನು ವಹಿಸದಿದ್ದರೂ, ದೈವವೂ ಅವರಿಗೆ ಪ್ರತಿಕೂಲವಿದ್ದರೂ ಅವರು ಸಮಾಜದ ವಿಷಯದಲ್ಲಿ ಆದರ ವಿಶ್ವಾಸಗಳನ್ನು ಕಳೆಯದೆ ಇರಲಿಲ್ಲ ಮತ್ತು ದೇವರು ಶಾಶ್ವತ ಕರುಣಿ ಎಂಬ ಮಾತಿನಲ್ಲಿ ನಂಬುಗೆಯನ್ನು ಕಳೆದುಕೊಂಡಿರಲಿಲ್ಲ. ಮುಂದಿನ ಆಯುಷ್ಯದಲ್ಲಿ ಅವರಿಗೆ ಸ್ತ್ರೀವಿರಹ ಮತ್ತು ಪುತ್ರವಿರಹದಂತಹ ದಾರುಣ ಆಪತ್ತುಗಳು ಬಂದುವು, ಮತ್ತು ಬಡತನದ ಮೂಲಕ ಅನೇಕ ಸಾಂಸಾರಿಕ ಕ್ಲೇಶಗಳೂ ಬಂದುವು. ಅವರಿಗೆ ಒದಗಿದ ದುಃಖ ಪರಂಪರೆಯಿಂದ ವ್ಯಥೆಗೊಂಡು ನಾನು, 'दुःखसंवेदनायैव रामे चैतन्यमाहितम्' ಎಂದು ಭವಭೂತಿಯ ಶಬ್ದಗಳಲ್ಲಿ ಅವರಿಗೆ (ಸಾಲಿ ರಾಮನಿಗೆ) ಹೇಳುತ್ತಿದ್ದೆ. "ಈ ದುಃಖಗಳ ಆಘಾತಗಳಿಂದ ನನ್ನ ಹೃದಯವನ್ನು ಶ್ರೀಹರಿ ಬಲಪಡಿಸಬೇಕೆಂದು ಸಂಕಲ್ಪಿಸಿರಲಾರನೇಕೆ?" ಎಂದು ಅವರ ಉತ್ತರ. ಅವರ ಒಬ್ಬನೇ ಒಬ್ಬ ಮಗನು ತೀರಿದ ಸುದ್ದಿಯನ್ನು ಕೇಳಿ ಅವರ ಮಿತ್ರರಾದ ನಾವು ಮರುಗಿದೆವು. 'ಅಯ್ಯೋ, ದೇವರ ರಾಜ್ಯದಲ್ಲಿ ನ್ಯಾಯವಿಲ್ಲ, ದೇವನು ನಿಷ್ಕರುಣಿ,'

ಎಂದಿವೆ. ರಾಮಚಂದ್ರರಾಯರು, "ಗುಡಿಯ ಕಟ್ಟುವ ಶಿಲ್ಪಿ । ಕೊಡತಿ ಯೊಳು ಬೆಟ್ಟಿಕ । ಲ್ಲೊಡೆವುದನು ಕಂಡವನು । ಕಿಡುಕನೆಂದೆನಲಹುದೆ? ॥ ಎಂದು ಮಗನಿಗರ್ಪಿಸಿದ 'ತಿಲಾಂಜಲಿ'ಯಲ್ಲಿ ಹೇಳಿದರು !

ಯದುಪತಿ ಲಕ್ಷ್ಮೀಪೂಜೆಯ ಕಾಲದಲ್ಲಿ ಹಾಡಿದ, 'ಬದುಕು ಬದು ಕೆಲೊ, ಜೀವ, ಬಂಟನಾಗಿ । ಹುದುಗಿದ್ದ ಶಕ್ತಿಯನು ಹೊರಹೊಮ್ಮಿಸಿ ॥' (ಪು. ೧೨೪), ಎಂಬ ಪ್ರಾಣಪೂರ್ಣವಾದ ಪದವು ಸಾಲಿಯವರ ಜೀವನ ದಲ್ಲಿಯ ಧ್ಯೇಯವನ್ನು ಮತ್ತು ಆ ಧ್ಯೇಯದಲ್ಲಿ ಅವರಿಗಿದ್ದ ದೃಢವಿಶ್ವಾಸವನ್ನು ಸಾರುತ್ತಿದೆ. ಅವರ ಈ ವಿಶ್ವಾಸವು ಎಷ್ಟು ಯೋಗ್ಯವಿದೆಂಬುದನ್ನು ಅವರ ಮುಂದಿನ ಚರಿತ್ರವೇ ತೋರಿಸುತ್ತದೆ.

ಸಾಲಿಯವರು ಪ್ರಥಿತಯಶರಾದ ಪ್ರತಿಭಾಸಂಪನ್ನ ಕವಿಗಳೆಂದು ಕರ್ನಾಟಕಕ್ಕೆ ಪರಿಚಿತರಾಗಿದ್ದಾರೆ. ಈಗ ಅವರು ಕಾದಂಬರಿ ಕ್ಷೇತ್ರದಲ್ಲಿ ಪ್ರವೇಶಿಸಿದ್ದಾರೆ. "ಜಯ, ಗುರುದೇವ !" ಎಂಬ ಅವರ ನಿಡುಗತೆ ಹೋದ ವರ್ಷ ಪ್ರಸಿದ್ಧವಾಗಿರುವುದು. ಈಗ "ಯದುಪತಿ"ಯ ೧ನೆಯ ಭಾಗವು ಹೊರಗೆ ಬರುತ್ತಲಿದೆ. ಈ ಕೃತಿಗಳ ಮೇಲಿಂದ ಅವರು ಈ ಮೇಲ್ತರಗತಿಯ ಕಥಾಲೇಖಕರಾಗಿ ಗಣಿಸಲ್ಪಡುವರೆಂದು ವಿಶ್ವಾಸದಿಂದ ಹೇಳಬಹುದು.

ಯದುಪತಿಯ ೧ನೆಯ ಭಾಗದ ಕಥಾವಸ್ತು ಸರಲವಿದೆ. ಚಿಕ್ಕ ವಯಸ್ಸಿ ನಲ್ಲಿ ತಂದೆತಾಯಿಗಳನ್ನು ಕಳೆದುಕೊಂಡ ಒಬ್ಬ ಬಡ ಹುಡುಗನು ತನ್ನ ಸದ್ಗುಣ ಗಳಿಂದ, ಅನೇಕ ಜನರ ಪ್ರೀತಿ ವಿಶ್ವಾಸಗಳನ್ನು ಪಡೆದುಕೊಂಡು ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಉತ್ತಮ ರೀತಿಯಿಂದ ತೇರ್ಗಡೆಯನ್ನು ಹೊಂದುತ್ತಾನೆ. ಕಥಾ ವಸ್ತು ಇಷ್ಟೇ. ಇದರಲ್ಲಿ ಯುವಕ-ಯುವತಿಯರ ಪ್ರಣಯದ ವರ್ಣನೆಯಿಲ್ಲ, ರಹಸ್ಯಮಯ ಇಲ್ಲವೆ ಚಮತ್ಕೃತಿಪೂರ್ಣ ಸನ್ನಿವೇಶಗಳೂ ಇಲ್ಲ. ಆದರೂ ಹೃದ ಯಂಗಮವಾಗುವಂತೆ ಕಲಾಪ್ರಚುರವಾಗಿ ಅದು ಚಿತ್ರಿಸಲ್ಪಟ್ಟಿದೆ. ಮನೋ ಬೋಧಕ ಸಂನಿವೇಶಗಳಿಂದ, ವಿಚಾರಪ್ರೇರಕವಾದ ಮತ್ತು ಓದುಗರನ್ನು ಉಚ್ಚವಾತಾವರಣದಲ್ಲಿ ಒಯ್ದಿರಿಸುವ ಸಂಭಾಷಣಗಳಿಂದ, ಉದ್ಬೋಧಕವಾದ ತತ್ತ್ವವಿವೇಚನೆಗಳಿಂದ ಸಂಗ್ರಾಹ್ಯವಾದ ಬಿಡಿಮಾತುಗಳಿಂದ ಮತ್ತು ರಸವ ತ್ತಾದ ವರ್ಣನೆಗಳಿಂದ, ಸಹೃದಯರಾದ ವಿದ್ವಜ್ಜನರ ಆದರಕ್ಕೆ ಯದುಪತಿಯ ಕಥೆ ಪಾತ್ರವಾಗದಿರದೆಂದು ನನ್ನ ವಿಶ್ವಾಸವಿದೆ. ಒಂದು ಮಾತಿನಲ್ಲಿ ಹೇಳುವು

ದೆಂದರೆ ಕಥಾಬಂಧವು ಆಹ್ಲಾದಕವಾಗಿದೆ. ಕೈಯಲ್ಲಿ ಒಮ್ಮೆ ಪುಸ್ತಕವನ್ನು ಹಿಡಿದರೆ ಮುಗಿವ ವರೆಗೆ ಕೆಳಗಿಡಬೇಕೆಂದು ಮನಸ್ಸಾಗುವುದಿಲ್ಲ.

ಸಾಲಿಯವರ ಜೀವನವು ಬಾಲ್ಯದಿಂದ ಧ್ಯೇಯನಿಷ್ಠವಿರುವುದರಿಂದ, ಮತ್ತು ಧ್ಯೇಯವನ್ನು ಮುಟ್ಟುವುದಕ್ಕಾಗಿ ಪ್ರಾಮಾಣಿಕ ಪ್ರಯತ್ನವು ಅವರ ದಿರುವುದರಿಂದ ಅವರ ಕಥೆಗಳಲ್ಲಿಯ ಮುಖ್ಯ ಪಾತ್ರಗಳು ಧ್ಯೇಯನಿಷ್ಠ ಮತ್ತು ಕರ್ತವ್ಯನಿಷ್ಠವಾಗಿರುವುದು ಸ್ವಾಭಾವಿಕವು. ಅವರ ಕಥೆಗಳು ಕಲಾಪೂರ್ಣ ವಾಗಿದ್ದರೂ ಮನೋರಂಜನೆಗಾಗಿ ಮಾತ್ರ ಬರೆದುವಲ್ಲ. ಪ್ರಾಣಪೋಷಕವೂ ಉದಾತ್ತವೂ ಆದ ಹಲಕೆಲವು ತತ್ತ್ವಗಳ ಮಹತ್ತ್ವವನ್ನು ಅಪ್ರತ್ಯಕ್ಷ ರೀತಿ ಯಿಂದ ಓದುಗರ ಲಕ್ಷ್ಯಕ್ಕೆ ತಂದುಕೊಡುವುದೇ ಅವರ ಉದ್ದೇಶ. ಜೀವಕ್ಕೆ ಜನ್ಮದಿಂದ ಆರಂಭವಿಲ್ಲ, ಮರಣದಿಂದ ಕೊನೆಯಿಲ್ಲ. "ವಿಕಾಸವು – ಅಮ- ರ್ಯಾದ ವಿಕಾಸವು—ಜೀವದ ಧರ್ಮವು....ವಿಕಾಸವು ಜೀವದ ಧರ್ಮವಾಗಿ ರುವುದರಿಂದಲೇ ನಮ್ಮ ಕಲ್ಪನೆಗೂ ನಿಲುಕದ ತೇಜಸ್ಸುಳ್ಳ ಮಹಾವಿಭೂತಿ ಗಳನ್ನು ಆಗಾಗ ಈ ಜಗತ್ತು ಕಾಣುವುದು." (ಪು. ೨೮). ಆಯುಷ್ಯದಲ್ಲಿ ಅನೇಕ ಲೋಪದೋಷಗಳು ಆಗಬಹುದು. ಎಷ್ಟು ಜನ್ಮಗಳನ್ನು ತಾಳಿದರೂ ಅಡ್ಡಿಯಿಲ್ಲ. ಕಡೆಗೆ ಜೀವವು ವಿಕಾಸವನ್ನು ಪಡೆದು ಆತ್ಮೋನ್ನತಿಯನ್ನು ಮಾಡಿಕೊಳ್ಳುವುದು ಖಂಡಿತ; ಎಂಬ ಈ ತತ್ತ್ವವನ್ನು ಎಷ್ಟು ಪರಿಣಾಮಕಾರಿ ಯಾಗಿ ಸಾಲಿಯವರು ಬಣ್ಣಿಸಿರುವರು. ಯದುಪತಿ ಎಂತೊ ಏನೋ ಬಾಳಿ ಸಾವಿನೊಳಿ ಕೊನೆಗೊಳ್ಳಲು ಒಪ್ಪದ ಧೀರಪ್ರಕೃತಿಯವನು. ಅವನು ತನ್ನ ಸದ್ಗುಣಗಳಿಂದ ಅನೇಕರ ಪ್ರೇಮವಿಶ್ವಾಸಗಳನ್ನು ಸಂಪಾದಿಸಿ ವಿದ್ಯಾರ್ಥಿ ದಶೆಯ ಕರ್ತವ್ಯವನ್ನು ನೆರವೇರಿಸುತ್ತ, ತನ್ನ ವಿಕಾಸವನ್ನು ಮಾಡಿಕೊಳ್ಳುತ್ತ ನಡೆದನಿಷ್ಟೇ ಅಲ್ಲ, ತನ್ನ ಸದ್ಗುಣ ಸದಾಚಾರಗಳಿಂದ ತನಗೆ ಕಷ್ಟವಿತ್ತ ಜನರ ಹೃದಯವನ್ನು ಪಲ್ಲಟ್ಟಿಸಿ ಅವರ ವಿಕಾಸಕ್ಕೆ ನೆರವಾದ. ಶಾರದಾಬಾಯಿ ಅವನ ಅಪಮಾನ ಮಾಡಿದ್ದಳು, ಶೇಷಗಿರಿರಾಯರು ಅವನನ್ನು ದುರ್ಲಕ್ಷಿಸಿ ದ್ದರು. ಆದರೆ ಯದುಪತಿ ಇದಾವುದನ್ನೂ ಲಕ್ಷ್ಯಕ್ಕೆ ತಾರದೆ ಅವರ ಮಗ ನಾದ ಕಮಲಾಕ್ಷನನ್ನು ತನ್ನ ಗೆಳೆಯನಾಗಿ ಮಾಡಿಕೊಂಡು ಅವನ ಸ್ವಭಾವದಲ್ಲಿ ಇಷ್ಟವಾದ ಬದಲಾವಣೆಗಳನ್ನುಂಟುಮಾಡಿ, ಶೇಷಗಿರಿರಾಯರ ಮತ್ತು ಶಾರದಾ ಬಾಯಿಯು ಕೃತಜ್ಞತಾಪೂರ್ಣವಾದ ಪ್ರೇಮವನ್ನು ಸಂಪಾದಿಸಿದನು. ಅವನ

ಶೀಲವು ಅವರಲ್ಲಿ ಪಶ್ಚಾತ್ತಾಪವನ್ನು ಹುಟ್ಟಿಸಿತು. ಇದರಿಂದ ಅವರಿಬ್ಬರ ಜೀವಗಳು ವಿಕಾಸಗೊಳ್ಳಲು ಮಾರ್ಗವಾಯ್ತು. ಇದೇ ಬಗೆಯಾಗಿ ಭಟ್ಟರು ತಾವು ಮೊದಲಿನ ದಿವಸ ಯದುಪತಿಗೆ ಬಿರುನುಡಿಗಳನ್ನಾಡಿದುದಕ್ಕೆ ಪಶ್ಚಾತ್ತಾಪಗೊಂಡು ತಮ್ಮ ವರ್ತನವನ್ನು ನಿರ್ದೋಷವಾಗಿಸಲು ಯತ್ನಿಸತೊಡಗಿದರು. ಆಚಾರ್ಯರಿಗೆ ಆಪತ್ತನ್ನುಂಟುಮಾಡಿದ ಬಾಬಣ್ಣ ದೇಸಾಯರಿಗೂ ಪಶ್ಚಾತ್ತಾಪವಾಗಿ ಅವರ ಕ್ಷಮಾಪಣೆಯನ್ನು ಕೇಳಿಕೊಂಡು ತಮ್ಮ ಜೀವನದ ವಿಕಾಸಕ್ಕೆ ಅವರು ಅಣಿಮಾಡಿಕೊಂಡರು. ಒಮ್ಮೆ ನಾವು ‘ ವಿಕಾಸವು ಜೀವದ ಧರ್ಮವು ’ ‘ದೇವನ ರಾಜ್ಯದಲ್ಲಿ ನಿಶ್ಚಯವಾಗಿಯೂ ನ್ಯಾಯವಿದೆ,’ (ಪು.೨೮); ‘ ಮನುಷ್ಯನ ಅಂತಿಮಗತಿ ಮರಣವಲ್ಲ, ಮನುಷ್ಯನ ಅಂತಿಮಗತಿ ಜೀವನವು— ಜ್ಞಾನಮಯ ಜೀವನವು, ಆನಂದಮಯ ಜೀವನವು ’ (ಪು. ೮೮), ಎಂಬ ತತ್ತ್ವಗಳನ್ನು ಒಪ್ಪಿದರೆ, ಯಾವ ಜೀವಿಯೂ ಕೊನೆಯ ವರೆಗೂ ದುರ್ಜೀವಿಯಾಗಿ ಉಳಿಯುದು, ತನ್ನ ದುಷ್ಕೃತಿಗೋಸುಗ ಅದಕ್ಕೆ ಇಂದಿಲ್ಲ ನಾಳೆ ಅನುತಾಪವು ಹುಟ್ಟಿ ಸನ್ಮಾರ್ಗದಲ್ಲಿ ಅದು ನಡೆಯಲಾರಂಭಿಸಲೇಬೇಕು ಎಂಬ ಮಾತನ್ನು ಒಪ್ಪಲೇಬೇಕು. ಎಷ್ಟೋ ಜನರಿಗೆ ಒಂದೇ ಜನ್ಮದಲ್ಲಿ ಇಂತಹ ಮಂಗಲ ಪ್ರಸಂಗವು ಬರಬಹುದು, ಮತ್ತೆ ಕೆಲವರಿಗೆ ಅನೇಕ ಜನ್ಮಗಳ ಅನಂತರದಲ್ಲಿ ಬರಬಹುದು. ಈಗ ನಾವು ಕಾಣುತ್ತಿರುವ ಎಲ್ಲ ದುರ್ಜನರು ಇದೇ ಜನ್ಮದಲ್ಲಿ ಪಶ್ಚಾತ್ತಾಪದಿಂದ ಪುನೀತರಾದುದನ್ನು ನಾವು ನೋಡಲಿಕ್ಕಿಲ್ಲ. ಇಷ್ಟರಿಂದ ಅವರು ಮುಂದೆ ಎಂದೂ ಪುಣ್ಯಮಾರ್ಗದ ಸೌಂದರ್ಯಕ್ಕೆ ಎರವಾದವರು ಎಂದು ಹೇಳುವುದು ಧಾರ್ಷ್ಟ್ಯದ ಮಾತು. ನಮ್ಮ ದೃಷ್ಟಿ ಸಂಕುಚಿತವಾಗಿರುತ್ತದೆ. ನಾವು ಒಂದು ಜನ್ಮದೊಳಗಿನ ಘಟನೆಗಳನ್ನಷ್ಟೇ ಕಾಣುತ್ತೇವೆ. ಆದರೆ ನಾವು ಭಗವದ್ಗೀತೆಯೊಳಗಿನ ಭಗವಂತನ ಉಕ್ತಿಯನ್ನು ನೆನೆಯತಕ್ಕದ್ದು. ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಾನೆ, “ ನನ್ನವೂ ನಿನ್ನವೂ ಅನೇಕ ಜನ್ಮಗಳಾಗಿ ಹೋಗಿವೆ, ಮತ್ತು ಇನ್ನೂ ಅನೇಕ ಜನ್ಮಗಳನ್ನು ನಾವು ತಾಳಬೇಕು.” ಮರಣವು ಶರೀರಕ್ಕೆ, ಈ ಮರಣದ ಅನಂತರವೂ ಜೀವಕ್ಕೆ ಅಸ್ತಿತ್ವವಿದೆ. ಅಮರ್ಯಾದ ವಿಕಾಸವು ಜೀವದ ಧರ್ಮವು ಎಂಬ ದಿವ್ಯ ಸಂದೇಶವನ್ನು ಸಾಲಿಯವರು ತಮ್ಮ ಅಮೋಘ ವಾಣಿಯಿಂದ ಸಾರಿರುವರು. ಈ ಸಂದೇಶದ ಮರ್ಮವು ನಮಗೆ ಹೊಳೆದರೆ ದುರ್ಜನರೆಂಬವರ ವಿಷಯದಲ್ಲಿ ನಮ್ಮ ವೃತ್ತಿಯನ್ನು ಬದಲುಮಾಡಿಕೊಳ್ಳಬೇಕಾಗ

ವುದು. ನಾವು ಅವರ ಕಡೆಗೆ ಸಹಾನುಭೂತಿಯಿಂದಲೇ ನೋಡಬೇಕು, ಅವರು ದುರ್ಜನರಾಗುವ ಕಾರಣಗಳನ್ನು ಹುಡುಕಿ ಅವನ್ನು ನಿರ್ಮೂಲ ಮಾಡಲು ಎಸಗಬೇಕು. ಆದರಿಂದ ಅವರ ಮತ್ತು ನಮ್ಮ ಜೀವಕ್ಕೆ ಯೋಗ್ಯ ಮಾರ್ಗವು ದೊರೆತಂತಾಗುವುದು. ತಮಗೆ ಸುಧಾರಿಸಲು ಅವಕಾಶವಿದೆ, ಆಶೆಯಿದೆ ಎಂದು ದುರ್ಜನರು ಮನಗಂಡರೆ ಅವರ ವೃತ್ತಿಯಲ್ಲಿ ಪರಿವರ್ತನೆ ತಾನೇ ಆಗುವುದು.

"ಸಾಲಿಯವರ ಕಥೆಗಳಲ್ಲಿಯ ಮುಖ್ಯ ಪಾತ್ರಗಳು ಆದರ್ಶವ್ಯಕ್ತಿಗಳಿರುತ್ತಾರೆ. ದಿನದ ಅನುಭವದಲ್ಲಿ ಅಂತಹ ವ್ಯಕ್ತಿಗಳು ಅಷ್ಟೊಂದು ಕಾಣಬರುವುದಿಲ್ಲ. ಆದುದರಿಂದ ಸಾಲಿಯವರ ಕೃತಿಗಳು ವಾಸ್ತವಸಾಹಿತ್ಯವೆಂದು ಹೇಳಲು ಬರುವುದಿಲ್ಲ" ಎಂದು ಕೆಲ ಜನರು ಅಭಿಪ್ರಾಯಪಡಬಹುದು. ಈ ಅಭಿಪ್ರಾಯವು ತೀರತಪ್ಪಾದುದೆಂದು ನಾನು ಹೇಳಲಾರೆ. ಸಾಲಿಯವರ ಕೃತಿಗಳು ವಾಸ್ತವಸಾಹಿತ್ಯವೆಂದು ಎನಿಸಿಕೊಳ್ಳಲಿ ಅಥವಾ ಬಿಡಲಿ. ಆದರೆ ಸಾಹಿತ್ಯದ ಮುಖ್ಯ ಉದ್ದೇಶವು कान्तासंमिततयोपदेशयुजे ಎಂದು ಇಟ್ಟು ಕೊಂಡರೆ ಅವರ ಕೃತಿಗಳು ಮೇಲ್ತರಗತಿಯ ಸಾಹಿತ್ಯವೆಂದು ಹೇಳಬಲ್ಲೆ. ಬರಿಯ ಉಪದೇಶ ಮಾಡಹೋದರೆ ಬಹು ಜನರು ಅದನ್ನು ಓದುವುದಿಲ್ಲ. ಆದರೆ ಅದೇ ಉಪದೇಶವನ್ನು ಕೆಲವು ಸನ್ನಿವೇಶಗಳ ಮತ್ತು ಘಟನೆಗಳ ಮೂಲಕ ಕಲಾಪೂರ್ವಕವಾಗಿ ಅಪ್ರತ್ಯಕ್ಷ ರೀತಿಯಿಂದ ಮಾಡಿದರೆ, ಓದುಗರ ಮನಸ್ಸಿನ ಮೇಲೆ ಅದು ಪರಿಣಾಮಕಾರಿಯಾಗಿ ಬಿಂಬಿಸುತ್ತದೆ, ಮತ್ತು ಓದುಗರು ತಾವೇ ಆ ವಿಷಯದಲ್ಲಿ ವಿಚಾರಮಾಡತೊಡಗುತ್ತಾರೆ. ಈ ದೃಷ್ಟಿಯಿಂದ ನೋಡಿದರೆ ಸಾಲಿಯವರ ಕೃತಿಗಳು ಓದುಗರನ್ನು ವಿಚಾರಮಾಡಲು ಹಚ್ಚುವುವೆಂದು ಹೇಳಬಹುದು ಮತ್ತು ಹೀಗೆ ವಿಚಾರ ಮಾಡಲು ಹಚ್ಚುವುದೇ ಸಾಹಿತ್ಯದ ಸಾರ್ಥಕತೆ ಎಂದು ನಾನು ನಂಬಿದ್ದೇನೆ.

ಯಮಪತಿಯ ಕಥೆ ಒಂದು ಮಹತ್ತ್ವದ ಸಂದೇಶವನ್ನು ಹೇಳುತ್ತಿದೆ. ಆ ಸಂದೇಶವು ಸಾಲಿಯವರ ಶಬ್ದದಲ್ಲಿ ಇಂತಿದೆ:—

"ಜಗವನೇ ತೂಗುವ ಮಹಾಶಕ್ತಿ ನಿನ್ನದಿರೆ,
ನಗಿಸಿಕೊಳುವುದದೇಕೊ ದೀನನಾಗಿ ? ||
ನಗುತೆ, ನಗಿಸುತೆ, ಲೋಕವನು ಬೆಳಗು ನಲ್ಬಾಳ
ಹೊಗರಿನಿಂದಾತ್ಮಶಕ್ತಿಯನು ತೋರು ! || ಪು. ೧೨೪

ಈ ಕಥೆ ಪ್ರತಿಯೊಬ್ಬ ಕನ್ನಡಿಗನು ಓದಿ ನಲಿಯಲು, ಅಭ್ಯಸಿಸಲು ತಕ್ಕುದಾಗಿದೆ.

ಶ್ರೀ. ಸಾಲಿಯವರ ಭಾಷೆಯನ್ನು ಕುರಿತು ಹೆಚ್ಚಾಗಿ ಬರೆವ ಅವಶ್ಯಕತೆ ಇಲ್ಲ. ಭಾರತದ ಪ್ರಾಚೀನ ಭಾಷೆಗಳಾದ ಸಂಸ್ಕೃತದಲ್ಲಿಯೂ ಪಾಲಿಯಲ್ಲಿಯೂ ಅವರಿಗೆ ಗತಿಯುಂಟು. ಈ ಭಾಷೆಗಳಲ್ಲಿಯ ಶ್ರೇಷ್ಠ ವಾಙ್ಮಯದ ಸೌಷ್ಠವ ವನ್ನು ಅವರು ಸವಿದಿರುವರು ಮತ್ತು ಸವಿಯುತ್ತಿರುವರು. ಮರಾಠಿ, ಗುಜ ರಾತಿ ಮತ್ತು ಹಿಂದಿ ಅವರಿಗೆ ಪರಿಚಯದವು. ಪ್ರಥಮಶ್ರೇಣಿಯ ಇಂಗ್ಲಿಶ್ ಸಾಹಿತಿಗಳ ಕೃತಿಗಳನ್ನು ಆದರಪೂರ್ವಕವಾಗಿ ಇಂದಿಗೂ ಅವರು ಅಭ್ಯಸಿಸು ತ್ತಿರುವರು. ಹಳಗನ್ನಡದ ಸೌಂದರ್ಯಕ್ಕೆ ಅವರು ಮನಸೋತಿರುವರೆಂಬುದು ಅವರ ಕವನಗಳಿಂದ ಸ್ಪಷ್ಟವಾಗುತ್ತಿದೆ. ಈ ಎಲ್ಲ ಭಾಷೆಗಳಲ್ಲಿಯ ಸಾಹಿತ್ಯ ಕೃತಿಗಳ ಆದರಪೂರ್ವಕವಾದ ಅಭ್ಯಾಸದಿಂದ ಅವರ ಭಾಷೆಯಲ್ಲಿ ಪರಿಶುದ್ಧತೆ ಬಂದಿರುವುದು, ಅದರಲ್ಲಿ ಚಿತ್ತಾಕರ್ಷಕವಾದ ಲಾಲಿತ್ಯವು ಉಂಟಾಗಿರುವುದು. ಸಂದಿಗ್ಧತೆಯ ದೋಷವು ಸಾಲಿಯವರ ಭಾಷಾಸರಣಿಯಲ್ಲಿ ಇರುವುದಿಲ್ಲ. **Biblical in its simplicity and Upanishadic in its grandeur** ಎಂದರೆ ಸರಲತೆಯಲ್ಲಿ ಬೈಬಲಿನಂತೆಯೂ ಭವ್ಯತೆಯಲ್ಲಿ ಉಪ ನಿಷತ್ತುಗಳಂತೆಯೂ ಸಾಲಿಯವರ ಭಾಷಾಶೈಲಿ ಇರುತ್ತದೆಂದು ವಿದ್ವಾಂಸ ರೊಬ್ಬರು ಹೇಳಿದುದರಲ್ಲಿ ಅತಿಶಯೋಕ್ತಿ ಇಲ್ಲವೆಂದು ನಾನು ಹೇಳಬಲ್ಲೆನು.

ಕರ್ನಾಟಕದಲ್ಲಿ ಉಚ್ಚಶಿಕ್ಷಣದ ಪ್ರಸಾರವನ್ನು ತನ್ನ ಕಾರ್ಯವಾಗಿ ಇಟ್ಟುಕೊಂಡ ಮುಂಬಯಿ ಕರ್ನಾಟಕ ಪ್ರಾಗತಿಕ ಶಿಕ್ಷಣ ಸಂಘದವರು ಈ ಪುಸ್ತಕದ ಪ್ರಕಾಶನವನ್ನ ಕೈಕೊಂಡುದು ಸ್ತುತ್ಯವೂ ಅದರ ಉದ್ದೇಶಕ್ಕೆ ಅನು ಗುಣವೂ ಆಗಿದೆ.

ಧಾರವಾಡ<br>ವಿಕೃತಿ ಸಂ. ಚೈತ್ರ ಶು. ೧<br>ಮಾರ್ಚ ೧೯, ೧೯೫೦ } ರಂಗಾಚಾರ್ಯ ಜಾಹಗಿರದಾರ

नमोऽभिभूतलोकेऽस्मिन
कृतिनो ये प्रकाशदाः ॥



ಪೂಜ್ಯ ಶ್ರೀ ಆಲೂರ ವೆಂಕಟರಾಯರಿಗೆ

ಶ್ರೀಃ

# ಯದುಪತಿ

## ೧

ಕ್ರಿಸ್ತಾಬ್ದ ೧೪೪೭. ಬೇಸಗೆಯ ದಿನವು. ಮಧ್ಯಾಹ್ನದ ಬಿಸಿಲು ಉರಿ–ಉರಿ–ಉರಿಯುತ್ತಿದ್ದಿತು. ಅಂತಹ ಬಿಸಿಲಲ್ಲಿ ಹತ್ತು ವರ್ಷದ ಹುಡುಗನೊಬ್ಬನು ದಾರಿ ನಡೆಯುತ್ತಿದ್ದನು. ಆತನ ತಲೆಯಮೇಲೆ ಚಿಕ್ಕದೊಂದು ಹಾಸಿಗೆ ಸುರುಳಿ ಮತ್ತು ಕಂಕುಳಲ್ಲಿ ಚಿಕ್ಕದೊಂದು ಚೀಲವು ಇದ್ದಿತು. ಚೀಲದಲ್ಲಿ ಮೂರು ನಾಲ್ಕು ಪುಸ್ತಕಗಳು, ಒಂದು ಕಾಗದದ ಪೊಟ್ಟಣ ಮತ್ತು ಒಂದು ತಂಬಿಗೆ ಇದ್ದುವು. ಆ ಪುಸ್ತಕಗಳಲ್ಲಿ ಒಂದು ಕೈಬರೆಹದ ಪುಸ್ತಕವಿತ್ತು. ತನ್ನವೆಂಬ ವಸ್ತುಗಳು ಆತನವು ಇವಿಷ್ಟೆ.

"ಮುಂದಿನ ಊರು ಇನ್ನೂ ಎಷ್ಟು ದೂರವೊ?" ಎನ್ನುತ್ತ ಆತನು ದಾರಿಯ ಬದಿಯ ಒಂದು ಮರದ ನೆಳಲಲ್ಲಿ ಬಂದು, ಹಾಸಿಗೆಯನ್ನು ಮತ್ತು

ಚೀಲವನ್ನು ಕೆಳಗಿರಿಸಿ ಉಸ್ಸೆಂದು ಕುಳಿತುಕೊಂಡನು, ಮತ್ತು ಬೊಕ್ಕಣದಲ್ಲಿಯ ಒಂದು ಬಟ್ಟೆಯ ತುಣುಕನ್ನು ಹೊರದೆಗೆದು ಹರಿಯುತ್ತಿರುವ ಬೆವರನ್ನು ಒರಸಿ ಕೊಂಡನು. ಬಳಿಕ ಆತನು ಚೀಲದಿಂದ ಕಾಗದದ ಪೊಟ್ಟಣವನ್ನು ಹೊರಗೆ ತೆಗೆದು ಅದನ್ನು ಬಿಚ್ಚಿದನು. ಮೂರು ಮುಷ್ಟಿ ಅವಲಕ್ಕಿ ಮತ್ತು ಒಂದು ತುಣುಕು ಬೆಲ್ಲ ಅದರಲ್ಲಿ ಇದ್ದಿತು. ಹುಡುಗನಿಗೆ ಹಸಿವಾಗಿತ್ತು, ಆದರೆ ಹಸಿವಿ ಗಿಂತ ನೀರಡಿಕೆ ಹೆಚ್ಚಾಗಿತ್ತು. "ನನಗೆ ನೀರು ಎಲ್ಲಿ ದೊರೆಯಬಹುದು?" ಎಂದು ಆತನು ಯೋಚಿಸುತ್ತಿರುವಾಗ ಇಬ್ಬರು ದಾರಿಕಾರರು ತಮ್ಮ ಮೂರು ವರ್ಷದ ಮಗನೊಡನೆ ನೆರಳಿಗೆಂದು ಅದೇ ಮರದ ಕೆಳಗೆ ಬಂದು ಕುಳಿತರು. ಅವರ ಬಳಿಗೆ ಬಂದು ಹುಡುಗನೆಂದನು, "ಸಮೀಪದಲ್ಲಿ ಕುಡಿಯಲು ನೀರು ದೊರೆಯಬಹುದೇ?"

"ಒಂದು ಹರದಾರಿಯೊಳಗೆ ಎಲ್ಲಿಯೂ ನೀರು ಇಲ್ಲ. ಮುಂದೆ ಒಂದು ಹಳ್ಳವಿದೆ. ಅಲ್ಲಿ ಒರತೆಗಳಲ್ಲಿ ನೀರು ದೊರೆವುದು," ಗಂಡುಸು ಎಂದನು.

"ಅಯ್ಯೋ, ಇನ್ನೂ ಒಂದು ಹರದಾರಿ ಹೋಗಬೇಕು, ಆ ಬಳಿಕ ನೀರು! ಈಗಲೇ ಗಂಟಲು ಒಣಗಿದೆ!" ಉಸಿರುಗರೆಯುತ್ತ ಹುಡುಗನೆಂದನು.

"ತಮ್ಮಾ, ನಮ್ಮಲ್ಲಿ ಎರಡು ತತ್ರಾಣಿಗಳು ತುಂಬಿವೆ. ಆದರೆ ನಾವು ಕುರುಬರು, ನೀನು ಬ್ರಾಹ್ಮಣರವನು. ಆದರೂ ನಮ್ಮ ನೀರನ್ನು ಕುಡಿದಷ್ಟಕ್ಕೆ ಜಾತಿ ಹೋಗುವುದಿಲ್ಲ. ತೆಗೆದುಕೊಳ್ಳುವೆಯಾ? ನೀನು ಚಿಕ್ಕವನು. ಏನೂ ಚಿಂತೆಯಿಲ್ಲ. ತಂಬಿಗೆಯಿದ್ದರೆ ತಾ, ತುಂಬಿಕೊಡುವೆನು. ಪಾಪವು ಬಂದರೆ ನನಗೆ ಬರಲಿ. ನಿನ್ನ ಜೀವವು ಉಳಿಯಲಿ, ಮಗನೇ!" ಹೆಂಗುಸು ಎಂದಳು.

"ಅಮ್ಮಾ, ನಿನಗೆ ಪುಣ್ಯವು ಬರುವುದು. ನಾಲಗೆ ಸೇದುತ್ತಿದೆ. ನನ್ನನ್ನು ಬದುಕಿಸಿಕೊಳ್ಳು!" ಹುಡುಗನು ತಂಬಿಗೆಯನ್ನು ತೆಗೆದುಕೊಂಡು ಹೋಗಿ ಅವಳ ಮುಂದೆ ಹಿಡಿದನು. ಅವಳು ತಂಬಿಗೆಯನ್ನು ತುಂಬಿದಳು ಮತ್ತು ಎಂದಳು, "ತಿನ್ನಲು ಏನಾದರೂ ಉಂಟೊ?"

"ಇದೆ, ತಾಯೀ. ಅವಲಕ್ಕಿ ಇದೆ, ಬೆಲ್ಲವಿದೆ."

"ಮೊದಲು ಸ್ವಲ್ಪ ಬೆಲ್ಲವನ್ನು ತಿಂದು ನೀರುಕುಡಿ. ಬಳಿಕ ಅವಲಕ್ಕಿ ಯನ್ನು ತಿನ್ನುವೆಯಂತೆ."

ಹುಡುಗನು ಸ್ವಲ್ಪ ಬೆಲ್ಲವನ್ನು ಮೊದಲು ತಿಂದು ಬಳಿಕ ನೀರು ಕುಡಿದನು. ತರುವಾಯ ಸಾವಕಾಶವಾಗಿ ಅವಲಕ್ಕಿಯನ್ನು ತಿನ್ನತೊಡಗಿದನು. ಆ ಕುರುಬ ದಂಪತಿಗಳು ತಮ್ಮ ಬುತ್ತಿಯ ಗಂಟನ್ನು ಬಿಚ್ಚಿ ಒಂದು ತುಣುಕು ರೊಟ್ಟಿಯನ್ನು ಮಗುವಿನ ಕೈಯಲ್ಲಿ ಇಟ್ಟು ತಾವೂ ತಿನ್ನತೊಡಗಿದರು. ಬ್ರಾಹ್ಮಣರ ಹುಡುಗನು ಸ್ವಲ್ಪ ಅವಲಕ್ಕಿಯನ್ನು ಉಳಿಸಿ, ಉಳಿದುದನ್ನು ತಿಂದು ಮತ್ತೆ ಹೊಟ್ಟೆತುಂಬೆ ನೀರು ಕುಡಿದನು. ಆತನಿಗೆ ಆರಾಮುವೆನಿಸಿತು.

ಕುರುಬಗಿತಿ ಎಂದಳು, "ನೀನು ಯಾವೂರವನು, ತಮ್ಮಾ?"

"ನಾನು ದೇವನಹಳ್ಳಿಯವನು, ತಾಯೀ."

"ಎಲ್ಲಿಗೆ ಹೊರಟಿರುವೆ?"

"ರಾಮುಪುರಕ್ಕೆ."

"ನಮ್ಮ ಊರಿಗೇ ಹೊರಟಿರುವೆಯಲ್ಲ. ಇನ್ನೂ ಹತ್ತು ಹರದಾರಿ ನೆಲ. ಏನು ಕೆಲಸ?"

"ನಿಮ್ಮ ಊರಲ್ಲಿ ದೊಡ್ಡ ಶಾಲೆ ಇದೆ. ವಿದ್ಯೆ ಕಲಿಯಲಿಕ್ಕೆಂದು ಹೊರಟಿದ್ದೇನೆ."

"ನಿನ್ನ ತಂದೆತಾಯಿಗಳನ್ನು ಬಿಟ್ಟು ಅಷ್ಟು ದೂರ ಹೋಗುವೆಯಾ?"

"ಅವರೇ ನನ್ನನ್ನು ಬಿಟ್ಟು ದೂರ ಹೋಗಿರುವರು!"

"ಎಲ್ಲಿಗೆ ಹೋಗಿರುವರು, ಮಗನೇ?"

"ಶಿವನ ಬಳಿಗೆ!" ಹುಡುಗನು ಮುಖವನ್ನು ತಗ್ಗಿಸಿದನು. ಆತನ ಕಣ್ಣುಗಳಿಂದ ನೀರು ಧಾರೆಯಾಗಿ ಹರಿಯತೊಡಗಿತು. ಸಾವಕ್ಕನು ಕಣ್ಣುಗಳಿಗೆ ಸೆರಗನ್ನು ಒತ್ತಿಕೊಂಡಳು. ಬೀರಣ್ಣನ ಕಣ್ಣುಗಳು ನೀರುದುಂಬಿದುವು ಮತ್ತು ತುಟಿಗಳು ಅದಿರಿದುವು. ಸ್ವಲ್ಪ ಹೊತ್ತಾದ ಬಳಿಕ ಬೀರಣ್ಣನು ಎಂದನು, "ತಮ್ಮಾ, ನಿನ್ನ ಹೆಸರೇನು?"

"ಯದುಪತಿ."

"ರಾಮುಪುರದಲ್ಲಿ ನಿನ್ನ ಬಳಗದವರು ಯಾರಾದರೂ ಇರುವರೊ?"

"ಇರುವರು, ಅಣ್ಣಾ; ನನ್ನ ಸೋದರಮಾವನು ಇರುವರು."

"ಅವರ ಹೆಸರೇನು? ಏನು ಮಾಡುತ್ತಿರುವರು?"

"ಮುದ್ದೂರು ಶೇಷಗಿರಿರಾಯರು. ಏನು ಮಾಡುತ್ತಿರುವರೊ ಗೊತ್ತಿಲ್ಲ."

" ರಾಮಪುರವು ದೊಡ್ಡ ಊರು. ಅವರು ಯಾರೊ ನಾನು ಅರಿಯೆನು. ಅವರ ಮನೆ ಎಲ್ಲಿ? ಬಲ್ಲೆಯಾ ? "

" ಯಾವ ಓಣಿ ಗೊತ್ತಿಲ್ಲ. ಮುರಲೀಧರನ ಗುಡಿಯ ಹಿಂದೆ ಎಲ್ಲಿಯೊ ಅವರು ಇರುತ್ತಿರುವರಂತೆ. ಹುಡುಕಿಕೊಂಡು ಹೋಗುವೆನು. "

" ರಾಮಪುರವು ಇನ್ನೂ ಹತ್ತು ಹರದಾರಿ. ಇಲ್ಲಿಂದ ಎರಡು ಹರದಾರಿಗಳಾಚೆಗೆ ಸೊನ್ನೆಗುಂದವೆಂಬ ಹಳ್ಳಿಯಿದೆ. ಊರ ನಡುವೆ ಹನುಮಂತದೇವರ ಗುಡಿ ಇದೆ. ಇಂದು ಅಲ್ಲಿ ವಸ್ತಿಮಾಡು. ಗುಡಿಯ ಎದುರಿಗೆ ಬ್ರಾಹ್ಮಣರ ಮನೆಯಿದೆ. ಅಲ್ಲಿ ನಿನಗೆ ನೀರು ದೊರೆಯಬಹುದು. ನೀನು ಅಲ್ಲಿಗೆ ನೀರಿಗೆ ಹೋದಾಗ ಭಟ್ಟರು ತಾವಾಗಿಯೆ ನಿನ್ನನ್ನು ಊಟಕ್ಕೆ ಕರೆದರೆ ಒಲ್ಲೆನೆನಬೇಡ. ಹೊಟ್ಟೆಯಲ್ಲಿ ಅನ್ನವು ಬೇಕು ನೋಡು. ನಾಳೆ ಮಧ್ಯಾಹ್ನದ ಹೊತ್ತಿಗೆ ನಾನು ಅಲ್ಲಿಗೆ ಮರಳಿ ಬರುವೆನು. ಬಳಿಕ ನನ್ನೊಡನೆ ನಮ್ಮೂರಿಗೆ ಬರುವೆಯಂತೆ. "

" ಹಾಗೆಯೆ ಮಾಡುವೆನು. "

" ಬಳಿಯಲ್ಲಿ ಏನಾದರೂ ಹಣವು ಇದೆಯೆ ? "

" ಇದೆ. "

" ಎಷ್ಟು ? "

" ಐದಾಣೆ. "

" ಸಾವಿತ್ರೀ, ಸ್ವಲ್ಪ ಕಜ್ಜೂರವನ್ನು ಮತ್ತು ನಾಲ್ಕು ಕಡಲೆಯುಂಡೆಗಳನ್ನು ಯದುಪತಿಗೆ ಕೊಡುವೆಯಾ? "

ಸಾವಕ್ಕನು ಹಿಡಿ ಕಜ್ಜೂರವನ್ನು ಮತ್ತು ನಾಲ್ಕು ಕಡಲೆಯುಂಡೆಗಳನ್ನು ಬುಟ್ಟಿಯೊಳಗಿಂದ ತೆಗೆದು ಯದುಪತಿಗೆ ಕೊಟ್ಟಳು, ಮತ್ತು ಎಂದಳು, "ಮಗು, ಎರಡು ಸಜ್ಜೆಯ ರೊಟ್ಟಿಗಳನ್ನು ಕೊಡಲಾ? ಒಲ್ಲೆನೆನಬೇಡ. ನಾನು ಬ್ರಾಹ್ಮಣರಲ್ಲಿ ಬೆಳೆದವಳು. ನಾನೂ ನಿನ್ನ ಹಾಗೆ ಚಿಕ್ಕಂದಿನಲ್ಲಿ ಪರದೇಶಿಯಾಗಿದ್ದೆನು. ಗೌರಮ್ಮನವರು ನನ್ನನ್ನು ತಮ್ಮಲ್ಲಿ ತಂದು ದೊಡ್ಡವಳನ್ನು ಮಾಡಿದರು."

" ಅಕ್ಕಾ, ನಾನು ದೇವನಪಳ್ಳಿಯನ್ನು ಬಿಟ್ಟು ಮೂರು ದಿನಗಳಾದುವು. ಊರ ಬಿಡುವಮುಂದೆ ನೆರೆಮನೆಯ ರಂಗಕ್ಕನು ತನ್ನಲ್ಲಿದ್ದ ಅವಲಕ್ಕಿಯನ್ನು

ಕೊಟ್ಟಳು. ಎರಡು ದಿನ ಅದನ್ನೆ ಸ್ವಲ್ಪ ಸ್ವಲ್ಪ ತಿನ್ನುತ್ತ ಇದ್ದೆನು. ನಿನ್ನೆ ಸಂಜೆಯ ಕಾಲಕ್ಕೆ ಹಿಂದಿನ ಹಳ್ಳಿ ಹನುಮಕೊಂಡದಲ್ಲಿ ಒಬ್ಬರು ನನ್ನನ್ನು ಕೂಡಿದರು. ಅವರು ಲಿಂಗವಂತರು. ನಾವಿಬ್ಬರೂ ಅಲ್ಲಿ ಒಂದು ಗುಡಿಯಲ್ಲಿ ವಸ್ತಿಮಾಡಿದೆವು. ನಾನು ಹಸಿದಿದ್ದುದು ಮತ್ತು ನನ್ನಲ್ಲಿ ಇಷ್ಟೇ ಸ್ವಲ್ಪ ಅವಲಕ್ಕಿ ಇದ್ದುದು ಅವರಿಗೆ ಗೊತ್ತಾಗಿ ತಮ್ಮಲ್ಲಿದ್ದ ಎರಡು ರೊಟ್ಟಿಗಳಲ್ಲಿ ಒಂದನ್ನು ನನಗೆ ಕೊಟ್ಟು, 'ತಮ್ಮಾ, ನೀನು ಹಸಿದಿರುವಾಗ ನಿಮ್ಮ ಜಾತಿ ಯವರು ತಿನ್ನುತ್ತಿರುವ ಪದಾರ್ಥಗಳನ್ನು ಯಾರಾದರೂ ಪ್ರೀತಿಯಿಂದ ಕೊಟ್ಟರೆ ತೆಗೆದುಕೊಳ್ಳಬೇಕು ಒಲ್ಲೆನೆನಬಾರದು. ನೀನು ಹಸಿದಿರುವೆ. ಈ ರೊಟ್ಟಿ ಯನ್ನು ತೆಗೆದುಕೊಳ್ಳು, ತಿನ್ನು. ಜಾತಿ ಕೆಡುವುದಿಲ್ಲ,' ಎಂದು ಹೇಳಿದರು. ನಾನು ತಿಂದೆನು. ಅಕ್ಕಾ, ಪ್ರೀತಿಯಿಂದ ಕೊಟ್ಟುದನ್ನು ತೆಗೆದುಕೊಳ್ಳುವೆನು, ಒಲ್ಲೆನೆನ್ನುವುದಿಲ್ಲ "

ಸಾವಕ್ಕನು ಎರಡು ಸಜ್ಜೆಯ ರೊಟ್ಟಿಗಳನ್ನು, ಒಂದು ಗಾದ್ದೆ ಬೆಣ್ಣೆ ಯನ್ನು ಮತ್ತು ಸ್ವಲ್ಪ ಕಾಳಿಳ್ಳಿನ ಹಿಂಡಿಯನ್ನು ಒಂದು ಕಾಗದದಲ್ಲಿಟ್ಟು ಸರಿಯಾಗಿ ಮಡಿಸಿ ಪೊಟ್ಟಣವನ್ನು ಯದುಪತಿಯ ಕೈಯಲ್ಲಿ ಇಟ್ಟಳು. ಅವನು ಅದನ್ನು ತನ್ನ ಚೀಲದಲ್ಲಿ ಇಟ್ಟುಕೊಂಡನು. ಆ ಕುರುಬ ದಂಪತಿಗಳ ಉಪ ಕಾರವನ್ನು ಶಬ್ದಗಳಿಂದ ಹೇಗೆ ಮನ್ನಿಸಬೇಕೆಂಬುದು ಆ ಹತ್ತು ವರ್ಷದ ಹುಡುಗನಿಗೆ ಗೊತ್ತಾಗಲಿಲ್ಲ. ಗಂಡಹೆಂಡಿರ ಮುಖಗಳನ್ನು ಆದರಪೂರ್ವಕ ವಾಗಿ ಆತನು ನೋಡಿದನು. ಕಣ್ಣುಗಳಲ್ಲಿ ನೀರು ತುಂಬಿತು; ಗಲ್ಲಗಳ ಮೇಲೆ ಹರಿಯತೊಡಗಿತು. ಬೀರಣ್ಣನು ಎದ್ದು ಬಂದು, ಆತನ ಬಳಿಯಲ್ಲಿ ಕುಳಿತು ಆತನ ಬೆನ್ನಮೇಲೆ ಕೈಯಾಡಿಸಿದನು, ಮತ್ತು ಎಂದನು, " ತಮ್ಮಾ, ಯದುಪತೀ, ಎಲ್ಲರಿಗೂ ಅನ್ನ ಕೊಡುವವನು ದೇವನು. ನಮಗೆ ಈ ರೊಟ್ಟಿ ಬಂದುದು ಅವನಿಂದಲೆಯೆ. ಅವನೇ ಅದರಲ್ಲಿ ಒಂದು ಭಾಗವನ್ನು ನಿನಗ ಕೊಡಿಸಿದ್ದಾನೆಂದು ತಿಳಿ. ಸಾವಿತ್ರಿಯಲ್ಲಿ ಕುಳಿತು ಅವನು ಕೊಟ್ಟನು, ನಿನ್ನಲ್ಲಿ ಕುಳಿತು ತೆಗೆದುಕೊಂಡನು. ಕೊಟ್ಟವನೂ ಅವನೇ ತೆಗೆದುಕೊಂಡವನೂ ಅವನೇ. ನಮ್ಮೆಲ್ಲರ ಭಾರವನ್ನು ಅವನು ಹೊತ್ತಿದ್ದಾನೆ. ಯದುಪತೀ, ಅವನು ಕರುಣಿ, ನಮ್ಮೆಲ್ಲರಿಗೂ ಶಾಶ್ವತವಾಗಿ ಉಪಕಾರಮಾಡುವ ಕರುಣಿ. ಅವನನ್ನು, ಅವನ ಉಪಕಾರವನ್ನು ನೆನೆಯುತ್ತ ನಾವು ಒಳ್ಳೆಯವರಾಗಿರ

ಬೇಕು, ಇಷ್ಟೇ ನಮ್ಮ ಕೆಲಸವು. ಇನ್ನೂ ನಾವು ನಾಲ್ಕು ಹರದಾರಿ ಹೋಗ ಬೇಕು. ಈಗ ನಾವು ಹೊರಡುವೆವು. ನೀನು ಸ್ವಲ್ಪ ತಡೆದು ಬಿಸಿಲು ತಗ್ಗಿದ ಮೇಲೆ ಹೊರಡು. ನಿನ್ನ ದಾರಿ ಬಹಳವಿಲ್ಲ. ಎರಡೇ ಹರದಾರಿ. ಇನ್ನು ನಾವು ಹೊರಡೋಣವೇ ? ನಾಳೆ ಮಧ್ಯಾಹ್ನದೊಳಗೆ ನಾನು ನಿನ್ನನ್ನು ಸೊನ್ನೆಗುಂದದಲ್ಲಿ ಕೂಡುವೆನು. ನಾವು ಹೊರಡೋಣವೆ, ಮಗು ? "

" ಅಣ್ಣಾ, ನಿನ್ನ ಹೆಸರು ನನಗೆ ಗೊತ್ತಾಗಲಿಲ್ಲವಲ್ಲ ? "

" ಅಹುದು. ನನ್ನ ಹೆಸರನ್ನೇ ಹೇಳುವುದನ್ನು ಮರೆತೆನು. ನಾನು ಬೀರಣ್ಣ. ಇನ್ನು ಹೊರಡೋಣವೆ ? "

" ಹೋಗಿ ಬನ್ನಿರಿ." ಯದುಪತಿ ಎದ್ದು ನಿಂತು ಆ ದಂಪತಿಗಳತ್ತ ನೋಡುತ್ತ ನುಡಿದನು.

ಬೀರಣ್ಣನು ಮೂಟೆಯನ್ನು ತೆಗೆದುಕೊಂಡನು, ಸಾವಕ್ಕನು ಮಗನನ್ನು ಎತ್ತಿಕೊಂಡಳು. ಗಂಡಹೆಂಡಿರಿಬ್ಬರೂ ಯದುಪತಿಯನ್ನು ಕಣ್ತುಂಬೆ ಮತ್ತೊಮ್ಮೆ ನೋಡಿ, ಹೋಗಿ ಬರುತ್ತೇವೆ ಎಂದು ಹೇಳಿ ಮತ್ತೆ ಪ್ರವಾಸವನ್ನು ಪ್ರಾರಂಭಿಸಿದರು. ಅವರು ಕಾಣಿಸುವವರೆಗೆ ಯದುಪತಿ ಅವರನ್ನು ನೋಡುತ್ತ ನಿಂತು ಅವರು ಕಣ್ಮರೆಯಾದ ಬಳಿಕ ಕುಳಿತುಕೊಂಡನು. ಆತನು ಹೀಗೆ ಕುಳಿತಿರುವಾಗ ಎಷ್ಟೋ ದಾರಿಕಾರರು ಇತ್ತಿಂದ ಅತ್ತಕಡೆಗೆ ಅತ್ತಿಂದ ಇತ್ತಕಡೆಗೆ ಹೋಗಿಯೆ ಹೋಗುತ್ತಿದ್ದರು. ಎಷ್ಟೋ ಸಲ ವಿಶ್ರಾಂತಿಗಾಗಿ ಮರದ ಕೆಳಗೆ ಕೆಲವರು ಬಂದು ಕುಳಿತರು. ಹೀಗೆ ಬಂದವರಲ್ಲಿ ಕೆಲವರು ಯದುಪತಿಯನ್ನು ಮಾತನಾಡಿಸುತ್ತಿದ್ದರು, ಕೆಲವರು ತಮ್ಮಷ್ಟಕ್ಕೆ ಸುಮ್ಮನೆ ಕುಳಿತುಕೊಂಡು ಮುಂದೆ ಹೋಗುತ್ತಿದ್ದರು. ಅವರವರ ಭಾರವು ಅವರವರಿಗೆ. ಕೆಲವರಿಗೆ ಸುಖದ ಭಾರವು, ಕೆಲವರಿಗೆ ದುಃಖದ ಭಾರವು; ಭಾರವಿಲ್ಲದವರು ಬಹು ವಿರಳ. ಹೀಗಾಗಿ ಯದುಪತಿಯ ಕಷ್ಟಸುಖಗಳನ್ನು ಕುರಿತು ಆಸ್ಥೆಯಿಂದ ಕೇಳುವವರು ಆತನೊಡನೆ ಮಾತನಾಡಿದವರಲ್ಲಿ ಆ ಕುರುಬ ದಂಪತಿಗಳನ್ನು ಬಿಟ್ಟರೆ ಮತ್ತಾರೂ ಇರಲಿಲ್ಲ. ಈ ರೀತಿಯಾಗಿ ಒಂದು ಗಂಟೆ ಹೋಯ್ತು. ಬಳಿಕ ಆತನು ತನ್ನ ಸಾಮಾನುಗಳನ್ನು ಎತ್ತಿಕೊಂಡು ಮುಂದಿನ ಪ್ರವಾಸಕ್ಕಾಗಿ ನಡೆಯತೊಡಗಿದನು.

ಒಂದು ಹರದಾರಿ ಸಾಗಿತು. ಆಗ ಬೀರಣ್ಣನು ಹೇಳಿದ ಹಳ್ಳವು ಬಂದಿತು. ಬಲಿತ ಬೇಸಗೆಯಾಗಿದ್ದುದರಿಂದ ನೀರು ಹರಿಗಡಿದು ಅಲ್ಲಲ್ಲಿ ತಗ್ಗುಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ನಿಂತಿತ್ತು. ಪ್ರವಾಸಿಕರು ತೋಡಿದ ಕೆಲವು ಒರತೆಗಳು ಅಲ್ಲಿ ಇದ್ದುವು. ಯದುಪತಿ ಹಳ್ಳಕ್ಕೆ ಬಂದಾಗ ಒಂದು ಮರದ ಕೆಳಗೆ ಒಂದು ಚಕ್ಕಡಿ ನಿಂತಿತ್ತು. ಚಕ್ಕಡಿಯವನು ಎತ್ತುಗಳನ್ನು ಬಿಚ್ಚಿ ನೊಗಕ್ಕೆ ಕಟ್ಟಿ ಅವುಗಳ ಮುಂದೆ ತುಸು ಹೊಟ್ಟನ್ನು ಸುರಿವಿ ತಿನಿಸುತ್ತ ಕುಳಿತಿದ್ದನು. ಚಕ್ಕಡಿಯ ಪ್ರವಾಸಿಕರು—ಗಂಡಹೆಂಡಂದಿರು—ಅದೇ ಮರದ ಕೆಳಗೆ ಇನ್ನೊಂಡೆಡೆಯಲ್ಲಿ ಚಿಕ್ಕದೊಂದು ಗುಡಾರವನ್ನು ಹಾಸಿಕೊಂಡು ಮಾತನಾಡುತ್ತ ಕುಳಿತಿದ್ದರು. ಯದುಪತಿ ಮತ್ತೊಂದು ಮರದ ಕೆಳಗೆ ಬಂದು ಹಾಸಿಗೆ-ಚೀಲಗಳನ್ನು ಕೆಳಗಿಟ್ಟನು, ಮತ್ತು ಚೀಲದೊಳಗಿದ್ದ ತಂಬಿಗೆಯನ್ನು ತೆಗೆದುಕೊಂಡು ಒರತೆಗೆ ಬಂದನು. ನೀರು ತುಂಬಿಕೊಂಡು ಸ್ವಲ್ಪ ದೂರ ಹೋಗಿ ಕೈಕಾಲು ಮುಖಗಳನ್ನು ಸ್ವಚ್ಛವಾಗಿ ತೊಳೆದುಕೊಂಡು ಮತ್ತೆ ತಂಬಿಗೆಯನ್ನು ತುಂಬಿಕೊಂಡು ತನ್ನ ಮರದ ಕೆಳಗೆ ಬಂದನು. ಬಳಿಕ ಆತನು ಸಾವಕ್ಕನು ಕೊಟ್ಟ ಎರಡು ಕಡಲಿಯುಂಡೆಗಳನ್ನು ಮತ್ತು ಸ್ವಲ್ಪ ಕಜ್ಜೂರವನ್ನು ತಿಂದು ನೀರುಕುಡಿದು ಕೆಲಹೊತ್ತು ಆರಾಮವಾಗಿ ಕುಳಿತುಕೊಂಡನು. ಅನಂತರ ಮತ್ತೆ ಮುಂದೆ ನಡೆಯಲು ಮನಸ್ಸುಮಾಡಿ ಹಾಸಿಗೆ-ಚೀಲಗಳನ್ನು ಎತ್ತಿಕೊಂಡನು. ಆತನು ಹೊರಟುದನ್ನು ಕಂಡು ಇನ್ನೊಂದು ಮರದ ಕೆಳಗಿನ ಪ್ರವಾಸಿಕನು, “ ತಮ್ಮಾ, ನಿನ್ನ ಊರು ಯಾವುದು ? ” ಎಂದು ಕೇಳಿದನು.

“ ನನ್ನ ಊರು ದೇವನಹಳ್ಳಿ. ”

“ ಎಲ್ಲಿಗೆ ಹೊರಟಿರುವೆ ? ”

“ ರಾಮಪುರಕ್ಕೆ. ”

“ ಇನ್ನೂ ಒಂಬತ್ತು ಹರದಾರಿ ನೆಲವು. ಇಂದು ಎಲ್ಲಿ ವಸ್ತಿಮಾಡುವೆ?”

“ ಮುಂದಿನ ಹಳ್ಳಿಯಲ್ಲಿ, ಸೊನ್ನೆಗುಂದದಲ್ಲಿ. ”

“ ನಮ್ಮ ಊರು ರಾಮಪುರದ ದಾರಿಯ ಮೇಲೆಯೆ ಇದೆ. ಇಲ್ಲಿಂದ ನಾಲ್ಕು ಹರದಾರಿ. ನಮ್ಮೊಡನೆ ಬಾ. ಚಕ್ಕಡಿ ಇದೆ. ರಾತ್ರಿ ನಮ್ಮಲ್ಲಿದ್ದು ನಾಳೆ ಮುಂದೆ ಹೊರಡುವೆಯಂತೆ. ”

"ಇಲ್ಲ, ರಾಯರೇ; ಮುಂದಿನ ಹಳ್ಳಿಯಲ್ಲಿಯೆ ನಾನು ವಸ್ತಿ ಮಾಡುವೆನು."

"ಅದೇಕೋ? ನಮ್ಮೊಡನೆ ಬಂದರೆ ಒಳಿತಾಗುವುದಿಲ್ಲವೆ?"

"ಬರುತ್ತಿದ್ದೆನು. ಆದರೆ ಇಂದು ಮಧ್ಯಾಹ್ನ ರಾಮಪುರದವರೊಬ್ಬರು ಕೂಡಿದ್ದರು. ಅವರು ಯಾವುದೋ ಒಂದು ಹಳ್ಳಿಗೆ ಹೋಗಿ ನಾಳೆ ಮರಳಿ ಮಧ್ಯಾಹ್ನದ ಹೊತ್ತಿಗೆ ಸೊನ್ನೆಗುಂದದಲ್ಲಿ ನನ್ನನ್ನು ಕೂಡಿಕೊಳ್ಳುವರು. ಮುಂದೆ ಇಬ್ಬರೂ ಜೊತೆಯಾಗಿ ರಾಮಪುರಕ್ಕೆ ಹೋಗುವೆವು."

"ಹೀಗೋ? ನಮ್ಮೊಡನೆ ಮತ್ತೊಂದಿಷ್ಟು ದಾರಿ ಚಕ್ಕಡಿಯಲ್ಲಿ ಕುಳಿತು ಕೊಂಡು ಬರುತ್ತಿದ್ದೆ. ಶ್ರಮವು ಸ್ವಲ್ಪ ಉಳಿಯುತ್ತಿತ್ತು. ಆದರೂ ಚಿಂತೆ ಯಿಲ್ಲ. ಸೊನ್ನೆಗುಂದದವರೆಗಾದರೂ ಚಕ್ಕಡಿಯಲ್ಲಿ ಬಾ."

"ತಮ್ಮಾ, ಚಕ್ಕಡಿಯಲ್ಲಿ ಬಂದರೆ ನಾಲ್ಕಾಣೆ ಬಾಡಿಗೆ ಕೊಡಬೇಕು. ನಿನ್ನ ಹತ್ತಿರ ಹಣವು ಇದೆಯೆ?" ಚಕ್ಕಡಿಯ ನಾಗಪ್ಪನು ಎಂದನು.

"ನನ್ನ ಹತ್ತಿರ ಸ್ವಲ್ಪ ಹಣವು ಇದೆ. ಆದರೆ ಅದನ್ನು ಬಾಡಿಗೆಗೆ ವೆಚ್ಚಮಾಡಲು ಒಲ್ಲೆನು."

"ಹಾಗಾದರೆ, ನನ್ನ ಚಕ್ಕಡಿಯಲ್ಲಿ ನೀನು-ಬರಲಾರೆ."

"ನಾಗಪ್ಪಾ, ಒಬ್ಬ ಚಿಕ್ಕ ಹುಡುಗನು ನಿನ್ನ ಚಕ್ಕಡಿಗೆ ಎಷ್ಟು ಭಾರ ವಾಗುವನು? ಬರಲಿ ಬಿಡು," ಪ್ರವಾಸಿಕನು ಎಂದನು.

"ಭಾರವಾಗುವ ಮಾತಿಲ್ಲ, ನಾಯಿಕರೆ. ಬರುವ ರೊಕ್ಕವನ್ನು ಏಕೆ ಬಿಡಬೇಕು?"

"ಹುಡುಗನು ನಡೆದುಕೊಂಡು ಹೋಗುತ್ತಿರುವನು. ನಮ್ಮ ಚಕ್ಕಡಿಯೂ ತುಂಬಿಲ್ಲ. ಹುಡುಗನು ಕುಳಿತರೆ ಹೆಚ್ಚು ಭಾರವಾಗುವುದಿಲ್ಲ. ಹೀಗಿರಲು ಆತನ ಶ್ರಮವನ್ನು ಉಳಿಸಿದರೆ ನಿನಗೆ ಪುಣ್ಯವು ಬರುವುದಿಲ್ಲವೆ? ಆತನಾದರೂ ನಿನ್ನ ಚಕ್ಕಡಿಯಲ್ಲಿ ಬರುವುದೆಷ್ಟು? ಒಂದೇ ಒಂದು ಹರದಾರಿ."

"ಕಣ್ಣಿಗೆ ಕಾಣದ ಪುಣ್ಯಕ್ಕಾಗಿ ಕೈಯಲ್ಲಿ ಬರುವ ರೊಕ್ಕವನ್ನು ಯಾರು ಬಿಡುವರು? ನಾನು ಚಕ್ಕಡಿಯನ್ನು ಮಾಡಿದುದು ಬಾಡಿಗೆಗೋಸುಗ! ಪುಣ್ಯವು ನಿಮಗೆ ಬೇಕಾಗಿದ್ದರೆ ನೀವೇ ಕೊಟ್ಟುಬಿಡಿರಿ ನಾಲ್ಕಾಣೆ ರೊಕ್ಕವನ್ನು!"

ನಾಗಪ್ಪನ ಮಾತು ನಾಯಿಕರ ಕಿವಿಗೆ ಕೇಳಿಸಲಿಲ್ಲವೊ ಏನೊ! ಅವರು ಸುಮ್ಮನಿದ್ದರು.

"ನಾನು ನಡೆದುಕೊಂಡೇ ಹೋಗುವೆನು. ಈಗ ತಂಪು ಹೊತ್ತಾಗಿದೆ. ಒಂದೇ ಹರದಾರಿ, ದೀಪಹಚ್ಚುವ ಹೊತ್ತಿಗೆ ಹಳ್ಳಿಯನ್ನು ಸೇರುವೆನು," ಎಂದು ಯದುಪತಿ ಹೊರಟೇ ಬಿಟ್ಟನು.

* * * *

## ೨

ಈಗ ತಂಪು ಹೊತ್ತಾಗಿದ್ದರೂ ಆಗಾಗ ವಿಶ್ರಾಂತಿಯನ್ನು ಪಡೆದಿದ್ದರೂ ಮೂರು ದಿನಗಳಿಂದ ಪ್ರವಾಸಮಾಡುತ್ತಿದ್ದ ಆ ಹತ್ತು ವರ್ಷದ ಯದುಪತಿಗೆ ಒಂದು ಹರದಾರಿಯು ದಾರಿಯೂ ದೊಡ್ಡದಾಗಿ ತೋರಿತು. ಎಳೆದೆಳೆದು ಕಾಲುಹಾಕುತ್ತ ಆತನು ನಡೆದೇ ನಡೆದನು. ಹಿಂದಿನಿಂದ ಹೊರಟಿದ್ದ ನಾಗಪ್ಪನ ಚಕ್ಕಡಿ ಆತನನ್ನು ಕಂಡೂ ಕಾಣದಿದ್ದಂತೆ ಆತನ ಬಳಿಯಿಂದ ಹಾಯ್ದು ಹೋಯಿತು. ಚಕ್ಕಡಿಯಲ್ಲಿ ಬಂದು ಕುಳ್ಳಿರೆಂದು ಆತನನ್ನು ನಾಗಪ್ಪನೂ ಕರೆಯಲಿಲ್ಲ, ನಾಯಿಕರೂ ಕರೆಯಲಿಲ್ಲ! ದಣಿವು ಬಹಳವಾದದರಿಂದ ಸ್ವಲ್ಪ ಕುಳಿತುಕೊಂಡು ಹೋದರಾಯ್ತೆಂದು ಯದುಪತಿ ದಾರಿಯ ಮಗ್ಗುಲಲ್ಲಿ ಬಂದು ಕುಳಿತುಕೊಂಡನು. ಕುಳಿತಲ್ಲಿಂದ ದೂರದಲ್ಲಿ ಊರು ಕಾಣಿಸುತ್ತಿತ್ತು.

ದಣಿದಣಿದು ದಣಿವಾರಿಸಿಕೊಳ್ಳಲು ಕುಳಿತವನಿಗೆ ಎದ್ದು ಮತ್ತೆ ಮುಂದು ವರಿಯಲು ಮನಸ್ಸು ಆಗುವುದಿಲ್ಲ. ಯದುಪತಿ ಎಷ್ಟೋ ಹೊತ್ತು ಕುಳಿತು ಕೊಂಡನು. ಸಂಜೆಯಾಯ್ತು, ಮಬ್ಬು ಮುಸುಕಿತು. ಏಳಲು ಇನ್ನೂ ಆತನ ಮನಸ್ಸು ಒಲ್ಲದು. ಕತ್ತಲೆಯಾಯ್ತು. ಕೊನೆಗೆ ಮನಸ್ಸನ್ನು ಗಟ್ಟಿಮಾಡಿ ಆತನು ಎದ್ದು ನಡೆಯತೊಡಗಿದನು, ಹಾಗೂ ಹೀಗೂ ಹಳ್ಳಿಗೆ ಬಂದನು, ಮತ್ತು ಒಬ್ಬಿಬ್ಬರನ್ನು ವಿಚಾರಿಸಿ ಹನುಮಂತದೇವರ ಗುಡಿಗೆ ಬಂದನು.

ಗರ್ಭಗುಡಿಯಲ್ಲಿ ದೇವರ ಮುಂದೆ ಹಣತಿಯೊಂದು ಮಿಣಿಮಿಣಿ ಉರಿಯು ತ್ತಿತ್ತು. ಗುಡಿಯಲ್ಲಿ ಬೇರೆ ಬೆಳಕು ಇರಲಿಲ್ಲ. ಯದುಪತಿ ಹಾಸಿಗೆ ಚೀಲಗಳನ್ನು ಕೆಳಗಿಟ್ಟು ಕುಳಿತುಕೊಂಡನು. ಬೇರೆ ಜನರಾರೂ ಅಲ್ಲಿ ಇರಲಿಲ್ಲ. ಒಬ್ಬಿಬ್ಬರು ದೇವರ ದರ್ಶನಕ್ಕೆ ಬಂದು ಗಂಟೆಬಾರಿಸಿ ನಮಸ್ಕಾರಮಾಡಿ ಕೈಮುಗಿದು ಹೋಗಿ ಬಿಟ್ಟರು. ಯದುಪತಿ ನೀರಿಗಾಗಿ ಎದುರಿನ ಮನೆಯತ್ತ ನೋಡಿದನು. ಬಾಗಿಲು ಇಕ್ಕಿದ್ದಿತು ಚಿಕ್ಕದೊಂದು ಕಿಡಕಿಯೊಳಗಿಂದ ಒಳಗೆ ಬೆಳಕು ಇದ್ದುದು ಕಾಣಿಸುತ್ತಿತ್ತು. ಆತನು ಚೀಲದೊಳಗಿಂದ ತಂಬಿಗೆಯನ್ನು ಹೊರಗೆ ತೆಗೆದನು ಮತ್ತು ನೀರನ್ನು ತರಲು ಎದ್ದನು. ಆದರೆ ಆತನಿಗೆ ಒಂದು ಭಯವು, ಯಾರಾದರೂ ತನ್ನ ಸಾಮಾನುಗಳನ್ನು ಎತ್ತಿಕೊಂಡು ಹೋದರೆ? ಮತ್ತೆ ಸ್ವಲ್ಪ ಆಲೋಚಿಸಿ ಎಂದನು, "ಇಲ್ಲಿಯೆ ಎದುರಿಗೆ ಮನೆ ಇದೆ. ಬೇಗನೆ ತಿರುಗಿ ಬರುವೆನು. ಅಷ್ಟರಲ್ಲಿ ಯಾರು ಬಂದು ನನ್ನ ಸಾಮಾನುಗಳನ್ನು ಒಯ್ಯುವರು ?" ಹೀಗೆಂದುಕೊಂಡು ಸಾಮಾನುಗಳನ್ನು ಅಲ್ಲಿಯೆ ಬಿಟ್ಟು ಆತನು ಭಟ್ಟರ ಮನೆಗೆ ಬಂದು ಬಾಗಿಲನ್ನು ತಟ್ಟಿದನು. ಉತ್ತರವಿಲ್ಲ. ಮತ್ತೆ ತಟ್ಟಿದನು. ಈಗಲೂ ಉತ್ತರವಿಲ್ಲ. "ನನಗೂ ಅಷ್ಟು ನೀರಡಿಕೆ ಇಲ್ಲ, ಹಾಗೆಯೆ ತಿರುಗಿಹೋಗಲಾ ? ಆದರೆ ಕಾಲುಗಳಿಗೆ ಧೂಳು ಮೆತ್ತಿದೆ. ಕೈಕಾಲು ಗಳನ್ನು ತೊಳೆದುಕೊಂಡರೆ ಚೆನ್ನಾಗಿ ನಿದ್ದೆ ಬರುವುದು. ಭಟ್ಟರನ್ನು ಕೂಗಿ ನೋಡಲಾ ?" ಎಂದು, "ಭಟ್ಟರೇ," ಎಂದು ಕೂಗಿದನು. ಭಟ್ಟರು ಎದ್ದು ಬಂದು, ಬಾಗಿಲನ್ನು ತೆರೆದು, "ಏನಯ್ಯಾ, ಯಾರು ನೀನು ? ಎರಡು ಸಲ ಬಾಗಿಲನ್ನು ತಟ್ಟಿದೆ. ಉತ್ತರವು ಬರಲಿಲ್ಲವೆಂದ ಬಳಿಕ ನಿನಗೆ ಗೊತ್ತಾಗಬಾರದೇ ಎದ್ದು ಬಂದು ಬಾಗಿಲನ್ನು ತೆರೆಯಲು ನನಗೆ ಮನಸ್ಸಿರಲಿಲ್ಲವೆಂದು ? ಮೂರ ನೆಯ ಸಲ 'ಭಟ್ಟರೇ,' ಎಂದು ಕೂಗುತ್ತೀಯೆ. ಗುಡಿಯ ಮುಂದೆ ಮನೆಯನ್ನು ಏಕೆ ಕಟ್ಟಿಸಿದರೊ ನಮ್ಮವರು? ಯಾರು ಬೇಕಾದವರು ಯಾವಾಗ ಬೇಕಾದಾಗ ಬಂದು ತೊಂದರೆಕೊಡುವರು! ಏನು ಬೇಕಯ್ಯಾ ನಿನಗೆ? ಬೊಗಳು !" ಎಂದರು.

"ಸ್ವಲ್ಪ ನೀರು ದೊರೆಯಬಹುದೇನೋ ಎಂದು ಬಂದಿದ್ದೆನು."

"ದಾರಿಕಾರರು ನನ್ನ ಮನೆಯನ್ನು ಅರವಟ್ಟಿಗೆಯೆಂದು ತಿಳಿದಿರುವರು! ಅವರದಾದರೂ ಏನು ತಪ್ಪು? ಮುದುಕಿ ಹಂಡೆ ಹಂಡೆ ನೀರು ತುಂಬಿಟ್ಟು,

ಬಂದವರಿಗೆಲ್ಲ ನೀರುಕೊಟ್ಟು ಕಳಿಸಿದಳು. ನಾನು ಬೇಡವೆಂದು ಬಡಿದುಕೊಂಡರೂ ಅವಳು ಕೇಳುತ್ತಿರಲಿಲ್ಲ. ಹೀಗೆ ಮನೆ ಅರವಟ್ಟಿಗೆಯಾಯ್ತು. ಅವಳು ಸತ್ತು ಹೋದರೂ ನನಗೆ ತೊಂದರೆ ತಪ್ಪಲಿಲ್ಲ! 'ಯಾರಾದರೂ ನೀರಿಗೆ ಬಂದರೆ, ಇಲ್ಲ ಎನಬೇಡ,' ಎಂದು ಆಣೆಯಿಟ್ಟು ಸತ್ತಳು ಮುದುಕಿ! ನಿಲ್ಲಯ್ಯ, ನೀರನ್ನು ತರುವೆನು," ಎಂದು ಭಟ್ಟರು ಒಳಗೆ ಹೋಗಿ ಎರಡು ತಂಬಿಗೆಗಳನ್ನು ತುಂಬಿ ತಂದು, ಒಂದರ ನೀರನ್ನು ಯದುಪತಿಗೆ ಕೈಕಾಲು ತೊಳೆಯಲಿಕ್ಕೆ ಕೊಟ್ಟು, ಮತ್ತೊಂದರ ನೀರನ್ನು ಆತನ ತಂಬಿಗೆಯಲ್ಲಿ ಸುರುವಿ ಬಾಗಿಲನ್ನು ಇಕ್ಕಿಕೊಂಡರು.

ಭಟ್ಟರು ಬಿರುಸುನುಡಿಗಳನ್ನಾಡಿದರೂ ನೀರನ್ನು ಕೊಡದಿರಲಿಲ್ಲ. ಅದೇ ದೊಡ್ಡ ಮಾತು. ಅಷ್ಟಾದರೂ ತಾಯಿ ಗಂಗಮ್ಮನವರ ಪುಣ್ಯವು ಅವರಲ್ಲಿ ಉಳಿದಿತ್ತಲ್ಲವೆ? ಭಟ್ಟರೇನೋ ಕೆಟ್ಟವರಲ್ಲ, ಸ್ವಲ್ಪ ಸಿಟ್ಟಿನ ಸ್ವಭಾವದವರು. ಯಾವುದಾದರೂ ಕಾರಣದಿಂದ ಅವರಿಗೆ ಸಿಟ್ಟು ಬಂದರೆ, ಅದು ಬೇಗನೆ ಇಳಿಯುತ್ತಿರಲಿಲ್ಲ. ಮಾತನಾಡಿಸಿದವರ ಮೇಲೆ ಅವರು ಹರಿಹಾಯುತ್ತಿದ್ದರು, ಬಿರುಸು ಮಾತುಗಳೂ ಅವರ ಬಾಯಿಂದ ಬರುತ್ತಿದ್ದುವು. ಆದರೆ ತಾಯಿಯ ಉಪಕಾರ ಮಾಡುವ ಪ್ರವೃತ್ತಿ ಅವರಲ್ಲಿಯೂ ಇದ್ದಿತು. ಊರ ಜನರಿಗೆ ಅವರ ಈ ಸ್ವಭಾವವು ಗೊತ್ತಿದ್ದಿತ್ತು. ಆದುದರಿಂದ ಜನರಿಗೆ ಅವರು ಅಪ್ರಿಯರಾಗಿರಲಿಲ್ಲ. ಆದರೆ ಹೊಸಬರು ನೊಂದುಕೊಳ್ಳದೆ ಇರುತ್ತಿರಲಿಲ್ಲ.

ಭಟ್ಟರ ಬಿರುನುಡಿಗಳಿಂದ ಯದುಪತಿ ಮನದಲ್ಲಿ ಕಿವುಚಿದ ತಳಿರಂತೆ ನೊಂದನು. ತನ್ನ ಸ್ಥಿತಿಯ ಚಿತ್ರವು ಆತನ ಕಣ್ಣುಗಳ ಮುಂದೆ ನಿಂತಿತು. ಅದು ಬಹು ಭೀಷಣವಾಗಿ ತೋರಿತು. ಆತನು ನಡೆಯುತ್ತಿದ್ದಂತೆಯೇ ನಡುಗಿದನು. ನಡೆವ ಶಕ್ತಿ ಕುಗ್ಗಿತು. ಗುಡಿಯ ಹೆಬ್ಬಾಗಿಲ ಬಳಿಯ ಪಾವಟಿಗೆಯ ಮೇಲೆ ಆತನು ಸ್ವಲ್ಪಹೊತ್ತು ಕುಳಿತನು. ಆ ಭೀಷಣವಾದ ಚಿತ್ರದಲ್ಲಿ ಬೀರಣ್ಣನ ಮತ್ತು ಸಾವಕ್ಕನ ಮೂರ್ತಿಗಳು ಕಾಣಿಸತೊಡಗಿದುವು. ಅದರಿಂದ ಆತನಿಗೆ ಸಮಾಧಾನವಾಯ್ತು. ಬಳಿಕ ಆತನು ಎದ್ದು ಒಳಗೆ ತಾನು ಸಾಮಾನುಗಳನ್ನು ಇಟ್ಟಲ್ಲಿ ಬಂದನು. ಸಾಮಾನುಗಳೇ ಇರಲಿಲ್ಲ! ಆತನು ಅತ್ತಿತ್ತ ನೋಡಿದನು; ಎಲ್ಲಿಯೂ ಅವು ಕಾಣಿಸಲಿಲ್ಲ. ತಲೆಹಿಡಿದುಕೊಂಡು ಆತನು ಕೆಳಗೆ ಕುಳಿತು ಅತ್ತನು. "ಇದ್ದ ನಾಲ್ಕು ಪುಸ್ತಕಗಳು,

ಸಾವಕ್ಕನು ಕೊಟ್ಟ ತಿಂಡಿತಿನಿಸುಗಳು, ಹಾಸಿಗೆಹೊದಿಕೆಗಳು ಹೋಗಿ ಬಿಟ್ಟುವು. ಈಗ ಏನನ್ನು ತಿನ್ನಲಿ, ಎಲ್ಲಿ ಮಲಗಲಿ? ಹೊದೆದುಕೊಳ್ಳಲೂ ಏನೂ ಇಲ್ಲ. ರಾತ್ರಿಯನ್ನಾದರೂ ಹೇಗೆ ಕಳೆಯಲಿ?'' ಎನ್ನುತ್ತ, ಕಂಬನಿಗರೆಯುತ್ತ ಗೋಡೆಗೆ ಒರಗಿಕೊಂಡು ಚಿಂತಿಸುತ್ತ ಕುಳಿತವನು ಹೇಗೊ ಅಲ್ಲಿಯೆ ಕಣ್ಣು ಮುಚ್ಚಿ ಆತನು ನಿದ್ದೆಹೋದನು.

ನಸುಕಿನಲ್ಲಿ ಭಟ್ಟರು ಹನುಮಪ್ಪನ ದರ್ಶನಕ್ಕೆ ಬಂದು ನಮಸ್ಕಾರಮಾಡಿ ತಿರುಗಿ ಹೋಗುವಾಗ ಅವರ ದೃಷ್ಟಿ ಬರಿನೆಲದ ಮೇಲೆ ಗೋಡೆಗೆ ಹೊಂದಿಕೊಂಡು ಮಲಗಿದ ಯದುಪತಿಯತ್ತ ಹೋಯ್ತು. ಅವರು ಸಮೀಪಕ್ಕೆ ಬಂದು ನೋಡುತ್ತ ನಿಂತಿರುವಷ್ಟರಲ್ಲಿ ಹುಡುಗನು ಚಿಟ್ಟನೆ ಚೀರಿ ತಂಬಿಗೆಯನ್ನು ಗಟ್ಟಿಯಾಗಿ ಅವಚಿಕೊಂಡು ಏನನ್ನೊ ಗೊಣಗುತ್ತ ಎದ್ದು ಕುಳಿತನು. ಭಟ್ಟರು ಗಾಬರಿಯಾಗಿ, "ಏನು, ತಮ್ಮಾ, ಏನಾಯ್ತು?" ಎನ್ನುತ್ತ ಆತನ ಹತ್ತಿರ ಬಂದು ಬೆನ್ನಮೇಲೆ ಕೈಯಾಡಿಸಿದರು. ಹುಡುಗನು ಪೂರ್ಣವಾಗಿ ಎಚ್ಚತ್ತು, "ಕನಸಿನಲ್ಲಿ ಯಾರೊ ನನ್ನ ತಂಬಿಗೆಯನ್ನು ಕಸೆದುಕೊಳ್ಳಬೇಕೆಂದು ನನ್ನ ಮೈಮೇಲೆ ಬಂದರು. ಅದರಿಂದ ಹೆದರಿಕೆಯಾಗಿ ಚೀರಿದೆನು. ಮತ್ತೇನೂ ಇಲ್ಲ,'' ಎಂದನು. ಭಟ್ಟರು, ''ಹಾಸಿಗೆಯನ್ನು ಬಿಟ್ಟು ಬರಿನೆಲದ ಮೇಲೆ ಮಲಗಿರುವೆಯಲ್ಲ? ಅದೇಕೆ? ಎಲ್ಲಿ ಇದೆ ಹಾಸಿಗೆ?'' ಎಂದು ಕೇಳಿದರು.

''ನಾನು ನಿಮ್ಮಲ್ಲಿಂದ ನೀರನ್ನು ತೆಗೆದುಕೊಂಡು ಮರಳಿ ಇಲ್ಲಿಗೆ ಬರುವುದರೊಳಗೆ ಯಾರೊ ಅದನ್ನು ಒಯ್ದುಬಿಟ್ಟಿದ್ದರು. ನನ್ನದೊಂದು ಸಣ್ಣ ಚೀಲವು ಹಾಸಿಗೆಯೊಡನೆ ಹೋಗಿದೆ."

''ಅಯ್ಯೊ, ಬರಿಹೊಟ್ಟೆಯಿಂದ ಹಾಗೇ ನೆಲದಮೇಲೆ ಮಲಗಿಕೊಂಡೆಯಾ? ನನ್ನ ಕಡೆಗಾದರೂ ಬರಬೇಕಿತ್ತು?"

"ಏನುಮಾಡಬೇಕೆಂಬುದು ಗೊತ್ತಾಗದೆ ಯೋಚಿಸುತ್ತ ಕುಳಿತಲ್ಲಿಯೆ ನಿದ್ದೆಹೋದೆನು."

''ತಮ್ಮಾ, ನಾನು ನಿನಗೆ ಬಿರುಸು ಮಾತುಗಳನ್ನಾಡಿದೆನು. ನೀನು ಸ್ವಾಭಾವಿಕವಾಗಿಯೆ ನೊಂದುಕೊಂಡೆ. ಅದರಿಂದ ನನ್ನ ಮನೆಗೆ ಬರಬೇಕೆಂದು ನಿನಗೆ ಮನಸ್ಸಾದರೂ ಹೇಗಾಗಬೇಕು? ನನ್ನ ನಾಲಗೆ ಕೆಟ್ಟದು. ತಮ್ಮಾ, ಗುರು, ಬಿರುಸುಮಾತುಗಳು ಒಳಿತಲ್ಲವೊ! ನಿನ್ನ ಹಿರಿಯರ ಬಾಯಿಂದ

ಒಂದು ದಿನವೂ ಇಂತಹ ಮಾತು ಬರಲಿಲ್ಲ. ನಿನ್ನ ನಾಲಗೆ ಏಕೆ ಕೆಟ್ಟು ದಾಯ್ತು ? ' ಎಂದು ಮುದುಕಿ ಎಷ್ಟು ಸಲ ನುಡಿದಿರಲಿಕ್ಕಿಲ್ಲ? ಆದರೆ ನನಗೆ ಎಚ್ಚರಿಕೆ ಬರುವುದು ಯಾವಾಗಲೂ ಬುದ್ಧಿ ಹೋದ ಬಳಿಕ! ಏನೋ ಏನೊ! ನಿನ್ನ ಹೆಸರೇನು, ಮಗನೆ ?"

"ಯದುಪತಿ"

"ನಿನ್ನ ಊರು ?"

"ದೇವನಹಳ್ಳಿ."

"ಎಲ್ಲಿಗೆ ಹೊರಟಿರುವೆ ?"

"ರಾಮಪುರಕ್ಕೆ."

"ನಿನ್ನ ತಂದೆತಾಯಿಗಳು ಎಲ್ಲಿ ?"

"ನನಗೆ ತಂದೆತಾಯಿಗಳು ಇಲ್ಲ."

"ಸತ್ತಿರುವರೆ ?"

"ಅಹುದು."

"ಅಯ್ಯೋ! ಮಗು, ನೀನು ಈಗಲೆ ಹೊರಡಬೇಕೊ ? ಊಟ ಮಾಡಿ ಕೊಂಡು ಹೊರಡು. ಬೇಗನೆ ಅಡಿಗೆ ಮಾಡುವೆನು."

"ನಾನು ಈಗಲೇ ಹೊರಡುವುದಿಲ್ಲ. ಇಲ್ಲಿಗೆ ನಾನು ಬರುವಾಗ ರಾಮಪುರದವರೊಬ್ಬರು ನನಗೆ ದಾರಿಯಲ್ಲಿ ಕೂಡಿದ್ದರು. ಅವರಿಗೆ ಯಾವುದೊ ಒಂದು ಹಳ್ಳಿಗೆ ಹೋಗಬೇಕಾಗಿತ್ತು. ಅಲ್ಲಿಗೆ ಹೋಗಿ ಅವರು ಇಂದು ಮಧ್ಯಾಹ್ನದ ಹೊತ್ತಿಗೆ ಇಲ್ಲಿ ಮರಳಿ ಬರುವರು. ಅವರು ಬಂದ ಬಳಿಕ ಇಬ್ಬರೂ ಕೂಡಿ ಮುಂದೆ ಇಲ್ಲಿಂದ ಹೊರಡುವೆವು."

"ಅವರು ಯಾರು, ಮಗು ?"

"ಬೀರಣ್ಣನೆಂಬವರು."

"ಹಿರಿಯೂರು ಬೀರಣ್ಣನೊ ? ಅವನನ್ನು ನಾನು ಬಲ್ಲೆನು."

"ಬೀರಣ್ಣನೆಂಬುದಿಷ್ಟೇ ನನಗೆ ಗೊತ್ತಿದೆ."

"ಅವನೇ ಇರಬಹುದು. ಕುರ.ಬೆಟ್ಟ ಅವನ ಹೆಂಡತಿಯ ಅಜ್ಜನ ಊರು. ಆಗಾಗ ಅವನು ಅಲ್ಲಿಗೆ ಹೋಗುತ್ತಿರುವುದುಂಟು. ನನ್ನನ್ನು ಕಾಣದೆ

ಅವನು ಹೋಗುತ್ತಿರುವುದಿಲ್ಲ. ನಿನ್ನೆ ಸಂಜೆಯವರೆಗೆ ನಾನು ತೋಟದಲ್ಲಿಯೆ ಇದ್ದೆನು. ಆದರಿಂದ ಅವನ ಭೆಟ್ಟಿ ನನಗಾಗಲಿಲ್ಲ. ಬಲು ಒಳ್ಳೆಯ ಮನುಷ್ಯನು ಅವನು. ಅವನ ಹೆಂಡತಿ ಸಾವಿತ್ರಿ ಸಾವಿರ ಹೆಂಗುಸರಲ್ಲಿ ಒಬ್ಬಳು. ಬಲು ಒಳ್ಳೆಯವಳು, ಬಲು ಒಳ್ಳೆಯವಳು ”

“ ನನ್ನ ಗುರುತಿನ ಬೀರಣ್ಣನ ಹೆಂಡತಿಯೂ ಸಾವಕ್ಕ. ನೀವು ಹೇಳುವವರು ಅವರೇ ಇರಬಹುದು. ನನಗೆ ಸಾವಕ್ಕನು ತಿಂಡಿತಿನಿಸುಗಳನ್ನು ಕೊಟ್ಟಳು. ಅವನ್ನು ಚೀಲದಲ್ಲಿ ಇಟ್ಟುಕೊಂಡಿದ್ದೆನು. ಚೀಲದೊಡನೆ ಅವೂ ಹೋಗಿಬಿಟ್ಟವೆ. ”

“ ತಮ್ಮಾ, ನಿನ್ನ ಬೀರಣ್ಣನು ಹಿರಿಯೂರ ಬೀರಣ್ಣನೇ. ಸಂಶಯವಿಲ್ಲ. ಅವನಿಗೂ ಅಡಿಗೆ ಮಾಡುವೆನು. ಇಬ್ಬರೂ ಊಟಮಾಡಿಕೊಂಡು ಹೋಗುವಿರಂತೆ. ನಿನ್ನ ಹೆಸರೇನು ?”

“ ಯದುಪತಿಯೆಂದು ಹೇಳಿದೆನಲ್ಲವೆ ?”

“ ಅಹುದು, ಮರೆತೆನು. ಯದುಪತೀ, ಈಗ ನನ್ನೊಡನೆ ಬಾ. ತೋಟಕ್ಕೆ ಹೋಗುವ. ಅಲ್ಲಿಯೆ ಸ್ನಾನವನ್ನು ಮುಗಿಸಿಕೊಂಡು ಬೇಗನೆ ತಿರುಗಿ ಬರೋಣವಂತೆ. ”

ಭಟ್ಟರು ಯದುಪತಿಯೊಡನೆ ಮನೆಗೆ ಬಂದು ಎರಡು ಮಡಿಪಂಚೆ, ಎರಡು ನೀರುಪಂಚೆ, ಒಂದು ಕೊಡ ಮತ್ತು ಒಂದು ಸಬಕಾರದ ವೊಡೆ ಇಷ್ಟನ್ನು ತೆಗೆದುಕೊಂಡು ತೋಟಕ್ಕೆ ಹೋದರು.

ಗುಡ್ಡದ ಓರೆಗೆ ಭಟ್ಟರದು ಒಂದು ಒಂದುವರೆ ಎಕರೆ ಭೂಮಿ ತೋಟವಿತ್ತು, ಗುಡ್ಡದ ಅಡಿಯಲ್ಲಿ ಒಂದು ಬುಗ್ಗೆ ಇದ್ದಿತು. ಬುಗ್ಗೆಯಿಂದ ನೀರು ಬಹಳವಾಗಿ ಬರುತ್ತಿರಲಿಲ್ಲ, ದಿನಾಲು ಎಪ್ಪತ್ತು ಎಂಬತ್ತು ಕೊಡದಷ್ಟು ಬರುತ್ತಿದ್ದಿತು. ಬುಗ್ಗೆಯಿಂದ ನಾಲ್ಕೈದು ಮಾರುಗಳ ಅಂತರದಲ್ಲಿ ಚಿಕ್ಕದೊಂದು ಹೊಂಡವಿತ್ತು. ಬುಗ್ಗೆಯ ನೀರು ಹರಿದುಬಂದು ಅದನ್ನು ತುಂಬಿ ಗೋಮುಖದಿಂದ ಹೊರಗೆ ಬರುತ್ತಿತ್ತು. ಈ ನೀರು ಮುಂದೆ ತೋಟದ ಕೆಲಸಕ್ಕೆ ಉಪಯೋಗಿಸಲ್ಪಡುತ್ತಿತ್ತು. ತೋಟದ ಸುತ್ತಲು ಅಂಚಿನಲ್ಲಿ ಇಪ್ಪತ್ತು ಇಪ್ಪತ್ತೈದು ತೆಂಗಿನಮರಗಳಿದ್ದುವು. ಒಂದೆಡೆಯಲ್ಲಿ ನಿಂಬೆಯ ಗಿಡಗಳು,

ಇನ್ನೊಂದೆಡೆಯಲ್ಲಿ ಚಿಕ್ಕ ಬಾಳೆಯ ಬನವು ಮತ್ತೊಂದೆಡೆಯಲ್ಲಿ ಎಲೆಬಳ್ಳಿಯ ಸಾಲುಗಳು. ಸ್ವಲ್ಪ ಭೂಮಿಯಲ್ಲಿ ಕಾಯಿಪಲ್ಲೆ ಬೆಳೆದಿದ್ದಿತು. ಅವರ ನೆರೆಯಲ್ಲಿ ಸ್ವಲ್ಪ ಭೂಮಿಯಲ್ಲಿ ಹೂಬಳ್ಳಿಗಳು ಮತ್ತು ಹೂಗಿಡಗಳು ಇದ್ದುವು. ಭಟ್ಟರ ಕೌಶಲ್ಯವು ಎಲ್ಲೆಲ್ಲಿಯೂ ಒಡೆದು ಕಾಣಿಸುತ್ತಿತ್ತು. ಅವರಿಗೆ ಈ ತೋಟವೇ ಜೀವನೋಪಾಯವು.

ಮುಂಜಾವು. ತೋಟದ ಸೌಂದರ್ಯವು ಆಕರ್ಷಕವಾಗಿತ್ತು. ಅಲ್ಲಿಗೆ ಬಂದ ಬಳಿಕ ಯದುಪತಿಯ ಮನಸ್ಸು ಪ್ರಸನ್ನವಾಯ್ತು. ಸ್ವಲ್ಪಹೊತ್ತು ಅಲ್ಲಿ ಇದ್ದು, ಹೊರಗೆ ಹೋಗಿ ಬಂದು, ಆತನು ಕೈಕಾಲು ಮೋರೆಗಳನ್ನು ತೊಳೆದುಕೊಂಡನು. ಭಟ್ಟರು ಆತನಿಗೆ ಸ್ನಾನಮಾಡಲು ಹೇಳಿದರು ಮತ್ತು ಆತನು ಮೈಮೇಲಿನ ಬಟ್ಟೆಗಳನ್ನು ಕಳೆದಿಟ್ಟ ಕೂಡಲೆ ಅವನ್ನು ನೆನೆಯಿಸಿ ಸಬಕಾರ ಹಚ್ಚಿ ಹಸನಾಗಿ ಒಗೆದು ಒಣಹಾಕಿದರು. "ಬೇಡಿರಿ, ಭಟ್ಟರೇ, ನಾನೇ ಒಗೆದುಕೊಳ್ಳುವೆನು," ಎಂದು ಯದುಪತಿ ಎಷ್ಟು ಹೇಳಿದರೂ ಅವರು, "ನೀನು ಸ್ನಾನಮಾಡಯ್ಯಾ, ನಾನು ಹಸನಾಗಿ ಒಗೆದು ಕೊಡುವೆನು, ದೂಳಿಡಿದು ಬಟ್ಟೆಗಳು ಬಲು ಮಾಸಿವೆ. ನೀನೊಬ್ಬನು ನನಗೆ ಮಗನಂತೆ. ಸಂಕೋಚವು ಬೇಡ. ಅಯ್ಯೋ, ಪರದೇಶಿ ಮಗುವಿಗೆ ನಿನ್ನೆ ಎಷ್ಟು ಚುಚ್ಚಿ ಮಾತನಾಡಿದೆನಲ್ಲ! ನನ್ನ ನಾಲಗೆಗೆ ಮುಳ್ಳು ಮುರಿಯಲಿ! ಮಗು, ಯದುಪತಿ, ಅಳಬೇಡ, ಸುಮ್ಮನಾಗು, ಸುಮ್ಮನಾಗು. ಗೋಮುಖದ ಹತ್ತಿರ ಅಲ್ಲಿ ಬಂಡಿಯಿದೆ ನೋಡು, ಅದರ ಮೇಲೆ ಕುಳಿತುಕೊಂಡು ತಂಬಿಗೆಯಿಂದ ನೀರು ತೆಗೆದು ಕೊಂಡು ಸ್ನಾನಮಾಡು," ಎಂದು ಹೇಳಿದರು. ಯದುಪತಿ ಸ್ನಾನವನ್ನು ಮುಗಿಸಿದೊಡನೆ ಭಟ್ಟರು ಆತನಿಗೆ ಮೈಯ್ಯೊರಸಿಕೊಳ್ಳಲು ಒಂದು ಸೀರು ಪಂಚೆಯನ್ನು ಮತ್ತು ಉಟ್ಟುಕೊಳ್ಳಲು ಒಂದು ಮಡಿಪಂಚೆಯನ್ನು ಕೊಟ್ಟರು. ಬಳಿಕ ಆತನು ಕಳೆದಿಟ್ಟ ಚಣ್ಣಕ್ಕೆ ಸಬಕಾರ ಹಚ್ಚಿ ಅದನ್ನು ಸ್ವಚ್ಛವಾಗಿ ಒಗೆದು ಒಣಗಹಾಕಿ ತಾವೂ ಸ್ನಾನವನ್ನು ತೀರಿಸಿದರು. ತರುವಾಯ ಅವರು ಪಂಚೆಯನ್ನು ಒಗೆದುಕೊಂಡು ತೋಟದ ಮನೆಯಲ್ಲಿ ಹೋಗಿ ಅಲ್ಲಿ ಹಣ್ಣಾಗಲಿಟ್ಟ ಒಂದು ಬಾಳೆಯ ಗೊನೆಯಿಂದ ನಾಲ್ಕಾರು ಹಣಿಗೆಗಳನ್ನು ಕೊಯ್ದು ಕೊಂಡು ಬಂದರು, ಮತ್ತು ನಿಂಬೆಯ ಗಿಡಗಳಿಂದ ಎಂಟು ಹತ್ತು ಹಣ್ಣು ಗಳನ್ನು ತಂದರು. ಬಳಿಕ ಅವರು ಒಣಗಿದ ಬಟ್ಟೆಗಳನ್ನು ಸರಿಯಾಗಿ ಮಡಿಸಿ

ಗಂಟಿನಲ್ಲಿ ಕಟ್ಟಿ ಯದುಪತಿಯ ಕೈಯಲ್ಲಿ ಕೊಟ್ಟರು. ಅನಂತರ ಕೊಡವನ್ನು ತುಂಬಿಕೊಂಡು ಅವರು ಆತನೊಡನೆ ಮನೆಗೆ ಬಂದರು.

* * * *

೩

ಭಟ್ಟರು ಮನೆಗೆ ಬಂದ ಬಳಿಕ ಯದುಪತಿಗೆ ಮೊಸರವಲಕ್ಕಿಯನ್ನು ಮತ್ತು ಎರಡು ಬಾಳೆಹಣ್ಣುಗಳನ್ನು ತಿನ್ನಲು ಕೊಟ್ಟರು. ಆತನು ಅವನ್ನು ತಿಂದು ನೀರುಕುಡಿದ ತರುವಾಯ, ಅವರು ಮೂರುನಾಲ್ಕು ಪುಸ್ತಕಗಳನ್ನು ತಂದು, "ನಿನಗೆ ಬೇಕಾದುದನ್ನು ಓದು," ಎಂದು ಆತನಿಗೆ ಹೇಳಿ ಅಡಿಗೆಗೆ ಕುಳಿತರು. ಯದುಪತಿ "ಮಕ್ಕಳ ರಾಮಾಯಣ"ವನ್ನು ತೆರೆದು ಓದುತ್ತ ತಲ್ಲೀನನಾದನು.

ಹನ್ನೊಂದು ಗಂಟೆಗೆ ಭಟ್ಟರ ಅಡಿಗೆಯಾಯ್ತು. ಅನ್ನ, ಸಾರು, ಪಲ್ಲೆ, ಚಪಾತಿ, ತೊವ್ವೆ ಇವಿಷ್ಟು ಅಡಿಗೆಯ ಪದಾರ್ಥಗಳು ಸಿದ್ಧವಾದುವು. ಬಳಿಕ ಭಟ್ಟರು ಒಂದು ತೆಂಗನ್ನು ಒಡೆದು, ತುರಿದು, ಸಾರುಪಲ್ಲೆಗಳಿಗೆ ಸ್ವಲ್ಪಸ್ವಲ್ಪ ಕುರುವಲನ್ನು ಹಾಕಿ ಉಳಿದುದನ್ನು ಚಟ್ಟಣಿ ಮಾಡಿದರು. ತರುವಾಯ ಅವರು ಬಾಳೆಯೆಲೆಗಳ ಪೆಂಡೆಯನ್ನು ಬಿಚ್ಚಿ ಮೂರುನಾಲ್ಕು ಎಲೆಗಳನ್ನು ಸರಿಗೊಳಿಸಿಟ್ಟು ಎಂಟುಹತ್ತು ದೊನ್ನೆಗಳನ್ನು ಹಚ್ಚಿಟ್ಟರು. "ಇನ್ನೂ ಬೀರನು ಬರಲಿಲ್ಲವೇಕೊ?" ಎನ್ನುತ್ತ ಎರಡು ಮೂರು ಸಲ ಹೊರಗೆ ಬಂದು ನೋಡಿದರು.

ಭಟ್ಟರಿಗೆ ಅಂದು ಏನೋ ಒಂದು ಬಗೆಯ ಉಮ್ಮಳಿಕೆ. "ಪರದೇಶಿ ಮಗನಿಗೆ ಚುಚ್ಚಿ ಮಾತನಾಡಿದೆನಲ್ಲ! ವಸಕ್ಕನೆ ಆತನ ಮೈಮೇಲೆ ನಾನು ಹೋದೆನು! ಮುದುಕನಾಗುತ್ತ ಬಂದೆನು, ಇನ್ನೂ ಬುದ್ಧಿ ನನಗೆ ಬರಲೊಲ್ಲದು!" ಎನ್ನುತ್ತ ಅವರು ಮನಸ್ಸಿನಲ್ಲಿ ಮಿಡುಗಿದರು. ನಾಲ್ಕಾರು ಸಲ ಅವರು ಯದುಪತಿಯ ಕಡೆಗೆ ನೋಡಿದರು. ಆತನು ರಾಮಾಯಣವನ್ನು ಓದುವುದರಲ್ಲಿ ತಲ್ಲೀನನಾಗಿದ್ದನು. ಚುಚ್ಚಿಸಿಕೊಂಡವನ ಗಾಯವು

ಯಾವಾಗಲೋ ಮಾಯ್ದಿದ್ದೆ, ಚುಚ್ಚಿದವನು ತಲ್ಲಣಿಸುತ್ತಿರುವನು! ಅಡ್ಡದಾರಿಗೆ ಹೋದವರನ್ನು ಎಚ್ಚರಿಸಲೆಂದು ಈ ತಲ್ಲಣವೋ? ತಿಳಿದು ನೋಡು, ಮಾನವನೆ; ಮತ್ತು ಹಾಗಿದ್ದುದಾದರೆ ದೇವನ ಉಪಕಾರವನ್ನು ಸ್ಮರಿಸು

ಮಧ್ಯಾಹ್ನವಾಗುತ್ತ ಬಂದಿತ್ತು. ಬೀರಣ್ಣನು ಬಂದು ಮೊದಲು ಹನುಮಪ್ಪನ ಗುಡಿಗೆ ಹೋದನು. ಅಲ್ಲಿ ಅವನು ಯದುಪತಿಯನ್ನು ಕಾಣದೆ ಭಟ್ಟರನ್ನು ವಿಚಾರಿಸಬೇಕೆಂದು ಅವರ ಮನೆಗೆ ಬಂದನು. ಪಡಸಾಲೆಯಲ್ಲಿ ಎದುರಿಗೆ ಯಗುಪತಿ ಓದುವುದರಲ್ಲಿ ತಲ್ಲೀನನಾಗಿ ಕುಳಿತುದನ್ನು ಕಂಡು ಅವನಿಗೆ ಸಮಾಧಾನವಾಯ್ತು. "ನನಗೆ ಗೊತ್ತೇ ಇತ್ತು. ಈತನು ಭಟ್ಟರ ಹೃದಯವನ್ನು ಸೆಳೆಯದೆ ಇರನೆಂದು. ಆದರೆ ಮೊದಲು ಈತನಿಗೆ ಸ್ವಲ್ಪ ಕಷ್ಟವಾಗಿರಬಹುದು. ಆಗಿದ್ದರೂ ಚಿಂತೆಯಿಲ್ಲ, ಭಟ್ಟರ ಪ್ರೇಮವನ್ನು ಈತನು ಸಂಪಾದಿಸಿರುವನಲ್ಲ! ಭಟ್ಟರು ಮುಂಗೋಪಿಯಾದರೇನಾಯ್ತು? ಅವರ ಮನಸ್ಸು ಬಂಗಾರದಂತಹದು. ಹಾಗೆಂದೇ ಭಟ್ಟರಿಗೆ ಯಾರಾದರೂ ಹೆಸರಿಟ್ಟರೆ ಸಾವಿತ್ರಿಗೆ ಅಷ್ಟು ಅಸಮಾಧಾನ. 'ನನ್ನ ತಾತಯ್ಯನಂತಹ ಮನುಷ್ಯರು ಲಕ್ಷದಲ್ಲಿ ಒಬ್ಬರು!' ಎಂದು ಅವಳು ಎನ್ನುವಳು." ಹೀಗೆ ಅವನು ತನ್ನಷ್ಟಕ್ಕೆ ನುಡಿದು, "ಯದುಪತೀ," ಎಂದು ಕರೆದನು.

"ಬೀರಣ್ಣ!" ಎನ್ನುತ್ತ ಯದುಪತಿ ಅವನೆಡೆಗೆ ಓಡಿ ಬಂದನು. ಆ ಶಬ್ದವನ್ನು ಕೇಳಿ ಭಟ್ಟರೂ ಒಳಗಿನಿಂದ ಬಂದರು. "ತಾತಯ್ಯ," ಎಂದು ಬೀರಣ್ಣನು ಭಟ್ಟರ ಅಡಿಗೆ ಎರಗಿದನು. "ಬಾ, ಮಗನೆ, ಬೀರಾ, ಬಾ, ಅಣ್ಣಾ," ಎಂದು ಭಟ್ಟರು ಅವನನ್ನು ಸ್ವಾಗತಿಸಿದರು, ಮತ್ತು ಎಂದರು, "ಬೀರಾ, ಹಿಂದುಗಡೆ ಮಾತನಾಡೋಣವಂತೆ. ಈಗ ಜಳಕಮಾಡಿ ಬಾ, ಅಡಿಗೆಯಾಗಿದೆ. ಊಟಮಾಡಿ ಕೂಡುವ. ಏನು ಬಿಸಿಲು ಇದು! ರಣಗುಟ್ಟುತ್ತದೆ! ಏಳು, ಮಗನೆ, ಬಾವಿಯ ಮೇಲೆಯೆ ಕೊಡವಿದೆ. ನೀನು ದಣಿದು ಬಂದಿರುವೆ, ಬೇಕಾದರೆ ಸ್ವಲ್ಪ ಹೊತ್ತು ಕುಳಿತುಕೊಂಡು ಏಳು. ನಿನ್ನ ಯದುಪತಿ ಜಾಣನಯ್ಯ. ಪುಸ್ತಕವನ್ನು ಆಗ ಕೈಯಲ್ಲಿ ತೆಗೆದುಕೊಂಡವನು ಇನ್ನೂ ಕೆಳಗಿಟ್ಟಿಲ್ಲ. ಅಯ್ಯೋ, ಪರದೇಶಿ ಕೂಸಿಗೆ ಚುಚ್ಚಿ ಮಾತನಾಡಿದೆನೊ, ಬೀರಾ! ಆಮೇಲೆ ನನಗೆ ಬುದ್ಧಿ ಬಂದಿತು. ಬೀರಾ, ಹೀಗೆಯೆ ಏನೋ ನನ್ನ

ಜನ್ಮ ಹೋಗುವುದು ? ಏನೇ ಇರಲಿ, ಬೀರಾ, ನನ್ನ ತಾಯಿಯ ಪುಣ್ಯ ಇನ್ನೂ ಉಳಿದಿದೆ. ಹಿಂದುಗಡೆಗಾದರೂ ನನಗೆ ಬುದ್ಧಿ ಬರುವುದಲ್ಲ ! ಏಳು, ಮಗನೆ, ಜಳಕಮಾಡಿ ಬಾ. ಸಾವಿತ್ರಿ ಕ್ಷೇಮವೆ ? ಮುಕುಂದ ಚೆನ್ನಾಗಿರುವ ನಷ್ಟೇ ? ಬಲು ಮುದ್ದು ಕೂಸು ! ಸಾವಿತ್ರಿ ಮಗುವಾಗಿದ್ದಾಗ ಹೇಗೆ ಇದ್ದಳೊ ಹಾಗೆಯೆ ಇದೆ ನೋಡು ಮಗು ಗೌರಿ ನೋಡಲಿಲ್ಲವಲ್ಲಾ ! ಸಾವಿತ್ರಿಗೆ ಅಂದು ಉಡಿತುಂಬಿದ ದಿವಸ ಎಷ್ಟು ಅವಳಿಗೆ ಆನಂದ! 'ಬೀರಣ್ಣಾ, ಹೆರಿಗೆಗೆ, ಸಾವಿತ್ರಿಯನ್ನು ಇಲ್ಲಿಗೇ ಕಳಿಸು. ನಾನು ಎಲ್ಲವನ್ನೂ ನೋಡಿಕೊಳ್ಳು ವೆನು,' ಎಂದು ಅವಳು ನಿನಗೆ ಹೇಳಿದುದು, ಬೀರಾ, ನಿನ್ನ ನೆನಪಿನಲ್ಲಿ ಇದೆಯೊ ? ಮುಂದೆ ನಾಲ್ಕೇ ದಿನ ಗೌರಿ ಬದುಕಿದ್ದುದು. ಬೀರಾ, ಆ ಪುಣ್ಯ ವಂತಿಯನ್ನು ಹಾವು ಕಚ್ಚಿ ಕೊಲ್ಲಬೇಕೇನೊ ? ಏನೋ ಏನೊ ! ಏಳು, ಮಗನೆ, ಸ್ನಾನಮಾಡಿ ಬಾ.

" ತಾತಯ್ಯಾ, ನೀವು ಊಟಮಾಡಿರಿ, ಅಷ್ಟರಲ್ಲಿ ನಾನು ಸ್ನಾನಮಾಡಿ ಕೊಂಡು ಬರುವೆನು. "

" ಅದು ಹೇಗೋ, ಬೀರಾ ? ನಿನ್ನನ್ನು ಉಪವಾಸಕೂಡಿಸಿ ನಾನು ಊಟಮಾಡಲಾ ? ನೀನು ನಮ್ಮಲ್ಲಿಗೆ ಬಂದಾಗೆಲ್ಲ ಒಂದು ದಿನವಾದರೂ ಗೌರಿ ಮೊದಲು ಉಣ್ಣುತ್ತಿದ್ದಳೆ ? ನಿನ್ನದೂ ನನ್ನದೂ ಊಟವಾದ ಬಳಿಕವೇ ಅಲ್ಲವೆ ಅವಳ ಊಟ ? ನೀನು ಮನೆಯ ಅಳಿಯನು ನೋಡು. ಆ ಪದ್ಧತಿ ಯನ್ನು ನಾನು ಮುಗ್ಗಿಸಲಾ ? ಗೌರಿ ಅಲ್ಲಿ ಏನೆಂದುಕೊಂಡಾಳು ? ಏನೊ, ಬೀರಾ ! ನೀನು ಕಬ್ಬಿಣದಂತಹ ಮನುಷ್ಯನು, ನಿನ್ನ ಕಣ್ಣಲ್ಲಿಯೂ ನೀರೆ ? ಏನೋ ಏನೊ ! ಏಳು ಮಗನೆ, ಸ್ನಾನಮಾಡಿಕೊಂಡು ಬಾ. "

ಬೀರಣ್ಣನು ಕಣ್ಣೊರಸಿಕೊಂಡು ಸ್ನಾನಕ್ಕೆ ಹೋದನು.

" ತಾತಯ್ಯಾ, ಊಟಕ್ಕೆ ಎಲ್ಲಿ ಕುಳಿತುಕೊಳ್ಳುವುದು ? " ಯದುಪತಿ ಕೇಳಿದನು.

" ನಡುಮನೆಯಲ್ಲಿ, ಮಗು. "

" ಆಗಳೆ ಗಾಳಿ ಬೀಸಿತು ನೋಡಿರಿ. ಅದರಿಂದ ದೂಳು ಬಿದ್ದಿದೆ. ಕಸಗೂಡಿಸಲಾ ? "

" ಗೂಡಿಸು, ಮಗನೆ. ಅಮೂಲೆಯಲ್ಲಿ ಕಸಬರಿಗೆ ಇದೆ ನೋಡು. "

ಯದುಪತಿ ನಡುಮನೆಯಲ್ಲಿ ಮತ್ತು ಪಡಸಾಲೆಯಲ್ಲಿ ಕಸಗೂಡಿಸಿ ಕೈಕಾಲುಗಳನ್ನು ಸ್ವಚ್ಛವಾಗಿ ತೊಳೆದುಕೊಂಡನು, ಮತ್ತು ಭಟ್ಟರು ಹೇಳಿದಂತೆ ಎಲೆಗಳನ್ನು ಹಾಕಿದನು ಮತ್ತು ದೊನ್ನೆಗಳನ್ನು ಇಟ್ಟನು. ತರುವಾಯ ಆತನು ಕುಡಿಯಲು ನೀರನ್ನು ತುಂಬಿಟ್ಟು ಉಪ್ಪು, ನಿಂಬೆಹೋಳು, ಚಟ್ಟಣೆಗಳನ್ನು ಬಡಿಸಿದನು. ಅಷ್ಟುಹೊತ್ತಿಗೆ ಭಟ್ಟರು ಬಾಳೆಹಣ್ಣಿನ ಸೀಕರಣೆಯನ್ನು ಮಾಡಿದರು.

ಬೀರಣ್ಣನು ಜಳಕವಮಾಡಿ ಬಂದನು. ಯದುಪತಿಯೂ ಅವನೂ ಊಟಕ್ಕೆ ಕುಳಿತರು. ಭಟ್ಟರು ನಿಧಾನವಾಗಿ ಬಡಿಸುತ್ತ ಮಾತುಕಥೆಗಳನ್ನು ಹೇಳುತ್ತ ಊಟಮಾಡಿಸಿದರು. ಊಟವಾಯ್ತು. ಎಂಜಲೆಲೆಗಳನ್ನು ತೆಗೆದೊಗೆದು ಗೋಮಯವನ್ನು ಹಚ್ಚುವ ಕೆಲಸವನ್ನು ಬೀರಣ್ಣನು ಮಾಡಿದನು. ಭಟ್ಟರು ಊಟಮಾಡಿಕೊಂಡು ಬಂದರು. ಮೂವರೂ ಪಡಸಾಲೆಯಲ್ಲಿ ಮಾತನಾಡುತ್ತ ಕುಳಿತರು.

ಭಟ್ಟರು ಎಂದರು, “ ಬೀರಾ, ಇಂದೇ ಏಕೆ ಹೊರಡಬೇಕು ? ನಾಳೆ ನಸುಕಿನಲ್ಲಿ ಹೊರಟರೆ ಆಗುವುದಿಲ್ಲವೆ ? ಇಂದು ಹೊರಟು ಮುಂದೆ ಎಲ್ಲಿಯಾದರೂ ವಸ್ತಿಮಾಡಿ ನಾಳೆ ನಿಮ್ಮೂರಿಗೆ ಹೋಗಬೇಕಾದರೆ ಮಧ್ಯಾಹ್ನವು ಮೀರುವುದು. ಇಂದಿನ ದಿನವನ್ನು ಆರಾಮವಾಗಿ ಕಳೆಯೋಣ. ನಾಳೆ ನಾನು ಬೇಗನೆ ಎದ್ದು ಅಡಿಗೆಮಾಡುವೆನು. ಬೆಳಗಾಗುವುದರೊಳಗೆ ಊಟವು ಮುಗಿವಂತೆ ಮಾಡುವೆನು. ಕಬೀರಸಾಹೇಬನ ಚಕ್ಕಡಿ ಇದೆ. ನಾನು ಕೇಳಿದರೆ ಅವನು ಚಕ್ಕಡಿಯನ್ನು ಕೊಡದಿರನು. ಬಲು ಒಳ್ಳೆಯವನು ಅವನು. ತಡೆ, ಇಲ್ಲಿಯೆ ಅವನು ಹೋಗುತ್ತಿದ್ದಾನೆ. ಕರೆವೆನು, ” ಎಂದು ಕಬೀರಸಾಹೇಬನನ್ನು ಕರೆದು ಚಕ್ಕಡಿ ದೊರೆಯಬಹುದೇನೆಂದು ಕೇಳಿದರು. “ ಭಟ್ಟರೆ, ನಿಮ್ಮ ಕೆಲಸಕ್ಕೆ ಆಗದಿದ್ದರೆ ನಾನು ಚಕ್ಕಡಿಯನ್ನು ಏಕೆ ಇಡಬೇಕು ?” ಎಂದು ಅವನು ಉತ್ತರವಿತ್ತನು. “ ನೀನು ಒಳ್ಳೆಯವನಯ್ಯಾ; ಗೌರಿಯ ಕಬೀರಣ್ಣನು ನೀನು. ಕಬೀರಾ, ನಿನ್ನ ನೆರವು ನನಗೆ ಇರಲಿಲ್ಲವಾಗಿದ್ದರೆ ನನ್ನ ತೋಟವು ಹೀಗಿರುತ್ತಿದ್ದಿತೆ ? ಬೀರಾ, ಗೌರಿಯನ್ನು ಬದುಕಿಸಿಕೊಳ್ಳಲು ಕಬೀರನು ಎಷ್ಟೊಂದು ಶ್ರಮಪಟ್ಟನು, ಎಷ್ಟೊಂದು ಸಾಹಸಮಾಡಿದನು ! ಶಿಮ್ಮನಳ್ಳಿ ಇಲ್ಲಿಂದ ಒಂದು ಹರದಾರಿಯ ದಾರಿ, ಕಾಡುನೆಲ, ರಾತ್ರಿ;

ಕಬೀರನು ಓಡುತ್ತ ಹೋಗಿ ಕಮ್ಮಾರ ನೀಲಕಂಠಪ್ಪನಿಂದ ಬೇರನ್ನು ತಂದನು. ಒಂದೂ ಕಾಲು ಗಂಟೆಯಲ್ಲಿ ತಂದನು. ಮೂರುಸುತ್ತು ತೇಯ್ದು ರಸವನ್ನು ಗೌರಿಯ ತುಟಿಯ ಬಳಿಗೆ ತರುವುದರೊಳಗೆ ನನ್ನನ್ನು ನೋಡುತ್ತಿದ್ದ ಗೌರಿ ಕಣ್ಮುಚ್ಚಿದಳು ! ಏನೋ ಏನೊ ! ಕಬೀರಾ, ನಾಳೆ ನಸುಕಿನಲ್ಲಿಯೆ ಹೊರಡಬೇಕು, ರಾಮಪುರಕ್ಕೆ. ಎಂಟು ಹರದಾರಿಯ ನೆಲ. ಎತ್ತುಗಳನ್ನು ಚೆನ್ನಾಗಿ ಮೇಯಿಸು. ಊಟಮಾಡಿಕೊಂಡು ಹೊರಡುವುದು. ಕಬೀರಾ, ನಿನ್ನ ಊಟವೂ ನಮ್ಮಲ್ಲಿಯೆ. ಹಾಗೇಕೆ ನೋಡುವೆ, ಕಬೀರಾ ? ನನ್ನ ಮಾತು ನಡೆಯಲೇ ಬೇಕಲ್ಲವೆ ?"

ಭಟ್ಟರ ಸ್ವಭಾವವನ್ನು ಬಲ್ಲ ಕಬೀರಸಾಹೇಬನು ಅವರ ಔತಣವನ್ನು ಸ್ವೀಕರಿಸಿ ಬೆಳಗಿನ ನಾಲ್ಕು ಗಂಟೆಗೆ ಚಕ್ಕಡಿಯನ್ನು ತರುವೆನೆಂದು ಹೇಳಿ ಹೋದನು.

ಬಳಿಕ ಬಟ್ಟರು ಬೀರಣ್ಣನೊಡನೆ ಬೇರೆ ಬೇರೆ ಮಾತುಗಳನ್ನೆತ್ತಿ ಮಾತನಾಡುತ್ತಿರುವಾಗ ಯದುಪತಿ ಆಗಾಗ ಆಕಳಿಸುತ್ತಿರುವುದನ್ನು ಕಂಡು, "ಯದುಪತೀ, ನಿನಗೆ ನಿದ್ದೆ ಬಂದಿರುವುದಯ್ಯಾ; ಸ್ವಲ್ಪ ಮಲಗಿ ಏಳು," ಎಂದು ನಡುಮನೆಯಲ್ಲಿ ಒಂದು ಚಾಪೆಯನ್ನು ಹಾಸಿಕೊಟ್ಟು, ಹೊದೆದುಕೊಳ್ಳಲು ಒಂದು ಮಡಿಪಂಜೆಯನ್ನುಕೊಟ್ಟು ಆತನಿಗೆ ಮಲಗಲು ಹೇಳಿದರು. ಆತನು ನಿದ್ದೆ ಹೋದ ಬಳಿಕ ಅವರು ಬೀರಣ್ಣನಿಗೆ ಹಿಂದಿನ ರಾತ್ರಿ ಜರುಗಿದ ಸಂಗತಿಯನ್ನು ತಿಳಿಸಿದರು. ಬೀರಣ್ಣನು ಎಂದನು, "ತಾತಯ್ಯ, ಹುಡುಗನ ಸಾಮಾನುಗಳು ಹೋದುವೆಂದು ನನಗೆ ಅಷ್ಟು ದುಃಖವಿಲ್ಲ. ದೇವಸ್ಥಾನದಲ್ಲಿ ವಸ್ತಿಗೆಂದು ಬಂದವರ ಸಾಮಾನುಗಳನ್ನು ಕದ್ದೊಯ್ಯುವ ಕೇಡಿಗರು ಇರುವರಲ್ಲಾ ಎಂದು ನನಗೆ ದುಃಖವು. ಬಡಹುಡುಗನ ಹಾಸಿಗೆಹೊದಿಕೆಗಳ ಅಥವಾ ಅಂಗಿ-ಅರಿವೆಗಳ ಬೆಲೆ ಎಷ್ಟಿರಬಹುದು ? ಆದರೆ ಅವನ್ನೂ ಒಯ್ಯುವ ಕೇಡಿಗಳು ಇರುವರಲ್ಲವೆ ? ದುಡಿದು ದೊರಕಿಸಿ ಉಣಬಾರದೆ ? ಕದ್ದು ಕಾಡಿಸಿ ಉಣಬೇಕೆಂಬುದೇಕೊ ?"

"ಅಯ್ಯಾ, ಕದ್ದೊಯ್ದವನು ಒಂದು ಬಗೆಯ ಕೇಡಿ, ಪರದೇಶಿ ಮಗುವಿಗೆ ಬಿರುಸು ನುಡಿದ ನಾನೊಂದು ಬಗೆಯ ಕೇಡಿ ! 'ಬೊಗಳು,'

ಎಂದೆನು ! ಬೀರಾ, ಆತನು ನಾಯಿಯೇನೊ ? ಅಂಜಂಜುತ್ತ, ' ಸ್ವಲ್ಪ ನೀರು ದೊರೆಯಬಹುದೇನೋ ಎಂದು ಬಂದಿದ್ದೆನು, ' ಎಂದು ಹುಡುಗನು ಹೇಳಿದರೆ, ನಾನು ಬಾಯ್ಗೆ ಬಂದಂತೆ ಬಡಬಡಿಸಿದೆನು ! ಬೀರಾ, ನನ್ನ ಮುದುಕಿ ತಾಯಿ ಗಂಗಮ್ಮನ ಪುಣ್ಯವು ದೊಡ್ಡದು. ಕೊನೆಗೆ ನನ್ನನ್ನು ಆಕೆ ಕಾಯ್ದಳು ! ಒಂದು ತಂಬಿಗೆ ನೀರನ್ನು ನಾನು ಕೈಕಾಲುಗಳನ್ನು ತೊಳೆದುಕೊಳ್ಳಲು ಕೊಟ್ಟೆನು ಆತನು ತೊಳೆದುಕೊಂಡು ಬಂದ ಬಳಿಕ ಇನ್ನೊಂದು ತಂಬಿಗೆ ನೀರನ್ನು ಕುಡಿಯಲು ಕೊಟ್ಟೆನು. ಆತನು ಕುಡಿದನೊ ಇಲ್ಲವೊ ? ಗುಡಿಗೆ ಆತನು ಮರಳಿ ಹೋಗುವುದರೊಳಗೆ ತಿಂಡಿತಿನಿಸು ಮೊದಲಾಗಿ ಎಲ್ಲವೂ ಹೋಗಿತ್ತು ! ನನ್ನ ಬಾಯ್ಗೆ ಹೆದರಿ ಪರದೇಶಿ ಮಗು ನನ್ನ ಮನೆಗೆ ಬಾರದೆ ಅಲ್ಲಿಯೆ ಬರಿನೆಲದ ಮೇಲೆ ಮಲಗಿ ಬಿಟ್ಟನು. ಏನೋ ಏನೊ !" ಭಟ್ಟರ ಕಣ್ಣುಗಳಿಂದ ಹನಿಗಳು ಉದಿರಿದುವು.

" ತಾತಯ್ಯಾ, ನೀವು ಕೇಡಿ ಅಲ್ಲ. ನಿಮ್ಮ ಹೃದಯವು ಹಾಲಿನಂತಹದು. ನೋಡಿರಿ, ಎಷ್ಟು ನಿಶ್ಚಿಂತನಾಗಿ, ಎಷ್ಟು ಸುಖವಾಗಿ ನಿಮ್ಮ ನೆರಳಲ್ಲಿ ಮಲಗಿರುವನು ಯದುಪತಿ "

" ಬೀರಾ, ನನ್ನ ನೆರಳಲ್ಲ; ನನ್ನ ಹಿರಿಯರು ಕಟ್ಟಿಸಿದ ಮನೆಯ ನೆರಳು. ಬೀರಾ, ನನ್ನತಾಯಿ ಗಂಗಮ್ಮನು ದುಡಿದ ಮನೆ ಇದು, ಗೌರಿ ಬಾಳ್ವೆಮಾಡಿದ ಮನೆ ಇದು. ಮನೆಯಲ್ಲಿ ಬಂದ ಬಳಿಕ ಬಂದವರಿಗೆ ಸುಖವಾಗುವುದು ಹಿರಿಯರ ಪುಣ್ಯದಿಂದ, ತಾಯಿ ಗಂಗಮ್ಮನ ಪುಣ್ಯದಿಂದ, ಗೌರಿಯ ಪುಣ್ಯದಿಂದ. ಆದರೆ ನಾನು ಮನೆಯಲ್ಲಿ ಬರಗೊಟ್ಟರಲ್ಲವೆ ? ಎಂತಹದಿದೆ ನನ್ನ ಬಾಯಿ ! ಏನೋ ಏನೊ !"

" ತಾತಯ್ಯ, ನಿಮ್ಮ ಹೃದಯವು ಹಾಲಿನಂತಿರುವುದು ಸುಳ್ಳಲ್ಲವಷ್ಟೇ ? ಸಾವಿತ್ರಿ ಬೆಳೆದು ದೊಡ್ಡವಳಾದುದು, ಬುದ್ಧಿವಂತಿಯಾದುದು ನಿಮ್ಮ ಪರಿಶ್ರಮದಿಂದಲೇ ಅಲ್ಲವೆ ?"

" ಮರುಳೆ ! ನನ್ನ ಪರಿಶ್ರಮದಿಂದಂತೆ ! ಗೌರಿ ಅವಳನ್ನು ತನ್ನ ಮಗಳಾಗಿ ಮಾಡಿಕೊಂಡಿದ್ದಳು. ಗೌರಿಯ ಮಗಳು ಬುದ್ಧಿವಂತಿಯಾಗದೆ ಇರುವಳೆ ? ಬೀರಾ, ಇನ್ನು ನಾಲ್ಕು ತಿಂಗಳಿಗೆ ನರಹರಿ ಬರುವನು. ಅಕ್ಕನು ತಮ್ಮನು ಕೆಲವುದಿನ ಇಲ್ಲಿ ಕೂಡಿ ಇರಲಿ. ಸಾವಿತ್ರಿಯನ್ನು ಕರೆಕೊಂಡು

ಬರುವೆಯಾ ? ಯದುಪತಿಯೂ ಬರಲಿ. ನರಹರಿಗೆ ಸಾವಿತ್ರಿ ಅಕ್ಕನಾಗಿರುವಳು, ಯದುಪತಿ ತಮ್ಮನಾಗುವನು,—" ಭಟ್ಟರಿಗೆ ಏನೋ ನೆನಪಾಯ್ತು. ಅವರು ಎದ್ದು ಹೋಗಿ ಒಂದು ಅರಿವೆಯ ಗಂಟನ್ನು ತೆಗೆದುಕೊಂಡು ಬಂದು ಅದನ್ನು ಬಿಚ್ಚಿದರು, ಮತ್ತು ಎಂದರು, "ಬೀರಾ, ನೋಡು; ಇವು ನರಹರಿಯ ಬಟ್ಟೆಗಳು. ಈಗಿನವಲ್ಲ, ಅವನು ಸಣ್ಣವನಿದ್ದಾಗಿನವು. ಈ ಅಂಗಿಗಳು, ಈ ಚೆಣ್ಣಗಳು ಯದುಪತಿಗೆ ಹಾಳತವಾಗುವುವಲ್ಲವೆ ? ಅಗೊ, ಯದುಪತಿಯೂ ಎದ್ದು ಬಂದನು. ಮಗು, ಬಚ್ಚಲಮನೆಗೆ ಹೋಗಿ ಮುಖ ತೊಳೆದುಕೊಂಡು ಬಾ. ಬೀರಾ, ಆತನ ಹಾಸಿಗೆಗೂ ಯೋಚನೆ ಬೇಡ. ಮೊನ್ನೆ ಕಂಬಳಿ ರಾಮಣ್ಣನು ಒಂದು ಬಿಳಿಯ ಕಂಬಳಿಯನ್ನು ತಂದುಕೊಟ್ಟನು. ಅದನ್ನು ನೆನೆಯಿಸಿ ಒಣಗಿಸಿಟ್ಟಿದ್ದೇನೆ. ಚಿಕ್ಕದೊಂದು ಗುಡಾರವಿದೆ. ಇಗೊ, ಇವೆರಡು ಮಗ್ಗುಲಹಾಸಿಗೆಗೆ ತುಂಡುಗಳು. ಒಂದು ಚಿಕ್ಕಕಂಬಳಿಯನ್ನು ಕೊಡುವೆನು. ಅದನ್ನು ಹಾಸಿಕೊಳ್ಳಲಿ. ಒಂದು ಹಚ್ಚಡದ ಹೋಳೂ ಇದೆ. ಬಾ, ಮಗು ಯದುಪತಿ, ನೋಡು ಈ ಅಂಗಿಚೆಣ್ಣಗಳು ನಿನಗೆ ಹಾಳತವಾಗುವುವೇನು ? ಹಾ, ಸರಿ; ಚೆನ್ನಾಗಿವೆ ಮಗು, ಇವೆಲ್ಲವನ್ನು ಈ ಬಟ್ಟೆಯಲ್ಲಿ ಕಟ್ಟಿಕೊಳ್ಳು. ಇವು ನಿನ್ನವು. ಬೀರಾ, ನೀನು ನಡೆದು ಬಂದಿರುವೆಯೆಂಬುದನ್ನು ಮರೆತೇ ಬಿಟ್ಟೆನು. ತುಸು ಮಲಗಿ ಏಳು. ನಾಳಿನ ಹಾದಿಗೆ ಏನನ್ನಾದರೂ ಮಾಡಿ ಕೊಡುವೆನು. ಹುಡುಗನಿಗೆ ಬೇಕು ನೋಡು. ನಡುಮನೆಯಲ್ಲಿ ಮಲಗಿಕೊಳ್ಳು. ನೀನು ನಿನ್ನ ರಾಮಾಯಣವನ್ನು ಮುಗಿಸಿದೇನಯ್ಯಾ, ಯದುಪತೀ ? ಇಲ್ಲವೊ ? ಮುಗಿಸಿಬಿಡು. ಇಳಿಹೊತ್ತಾಗುವುದರೊಳಗೆ ನಾನು ನನ್ನ ಕೆಲಸವನ್ನು ತೀರಿಸುವೆನು ಆ ಬಳಿಕ ತೋಟಕ್ಕೆ ಹೋಗೋಣ."

ಭಟ್ಟರು ಎದ್ದರು. ಬೀರಣ್ಣನು ಮಲಗಲು ನಡುಮನೆಗೆ ಬಂದನು. ಯದುಪತಿ ಪುಸ್ತಕವನ್ನು ತೆರೆದು ಓದತೊಡಗಿದನು.

ಬಿಸಿಲು ತಗ್ಗುವ ಹೊತ್ತಿಗೆ ಭಟ್ಟರ ಕೆಲಸವು ಮುಗಿಯಿತು. ಬೀರಣ್ಣನು ಮಲಗಿ ಎದ್ದನು, ಮತ್ತು ಯದುಪತಿಯ ಓದೂ ತೀರಿತು. ಮೂವರೂ ಉಪಹಾರವನ್ನು ಸೇವಿಸಿ ತೋಟದ ಕಡೆಗೆ ಹೊರಟರು. ಬೀದಿಯಲ್ಲಿ ಕೆಲವು ಹುಡುಗರು ಆಡುತ್ತಿದ್ದರು. ಅವರು ಭಟ್ಟರು ಬರುತ್ತಿರುವುದನ್ನು ಕಂಡೊಡನೆ ಗಾಬರಿಗೊಂಡು ಓಡ ತೊಡಗಿದರು. ನೋಡಿ ಭಟ್ಟರು ಎಂದರು,—

" ಬೀರಾ, ನೋಡಿದೆಯಾ ಆ ಹುಡುಗರನ್ನು ! ನನ್ನನ್ನು ಕಂಡೊಡನೆ ಅವರು ಓಡಿದರೇಕೆ ಬಲ್ಲೆಯಾ ? ನಿನ್ನೆ ದ್ವಾದಶಿ ಬೆಳಗಿನಲ್ಲಿ ಬೇಗನೆ ಊಟ ಮಾಡಿ ನಾನು ತೋಟಕ್ಕೆ ಹೋದವನು ತಿರುಗಿ ಬರಬೇಕಾದರೆ ಸಂಜೆಯಾಗಿ ಹೋಗಿತ್ತು. ಈ ಹುಡುಗರು ಬಲು ಕಿಡಿಗೇಡಿಗಳು, ಬೀರಾ. ನಾನು ಹಸುವಿನ ಕಾವಣಕ್ಕೆ ಕಂಬಗಳಿಗಾಗಿ ನಾಲ್ಕು ಕಟ್ಟಿಗೆಗಳನ್ನು ತಂದು ಹಿತ್ತಲಲ್ಲಿ ಇಟ್ಟಿದ್ದೆನು. ಇವರು ಗೋಡೆಯಮೇಲಿಂದ ಒಳಗೆ ಹಾರಿ ಬಂದು, ಆ ನಾಲ್ಕೂ ಕಂಬಗಳನ್ನು ಎತ್ತಿಕೊಂಡು ಒಯ್ದು, ಕಾಮನ ಕುಳ್ಳಿಗಳಲ್ಲಿ ಹಾಕಿ ಬಿಟ್ಟು, ನಾನು ಬರುತ್ತಿರುವುದನ್ನು ಕಂಡು ಬೊಬ್ಬೆಹುಟ್ಟಿ ಓಡಿದರು. ನಾನೂ ಓಡಿಹೋಗಿ ಇಬ್ಬರನ್ನು ಹಿಡಿದೆನು. ಎಲ್ಲ ಸಂಗತಿ ಗೊತ್ತಾಯ್ತು. ಮಕ್ಕಳನ್ನು ಬಡಿವುದಿದೆಯೆ ? ಕಿವಿ ಹಿಂಡಿ ಕಳಿಸಿದೆನು. ಕಷ್ಟಪಟ್ಟು ಕಂಬಗಳನ್ನು ದೊರಕಿಸಿದ್ದೆನು. ಕಿಡಿಗೇಡಿ ಮಕ್ಕಳು ಅವನ್ನು ಕಾಮನ ಕುಳ್ಳಿಗೆ ಸೇರಿಸಿದರು ! ತಿರುಗಿ ತರಬಹುದಾಗಿತ್ತು. ಆದರೆ ಅವು ಕಾಮನ ಕುಳ್ಳಿಗೆ ಸೇರಿದ್ದುವು ನೋಡು. ನಾನು ಅವನ್ನು ತಿರುಗಿ ತರಲಿಲ್ಲ. ಮನಸ್ಸಿಗೇನೋ ವ್ಯಥೆಯಾಯ್ತು, ಬಹಳ ವ್ಯಥೆಯಾಯ್ತು. ಗೊತ್ತಾಗಬಾರದೇನೋ ಹುಡುಗರಿಗೆ ಕಂಬದ ಕಟ್ಟಿಗೆಗಳನ್ನು ಒಯ್ಯಬಾರದೆಂದು? ಈ ಹುಡುಗರೆಂದರೆ ಯಮನಂತೆ ನೋಡು ! ಆತನಿಗಾದರೂ ಎಲ್ಲಿ ಗೊತ್ತಾಗುತ್ತದೆ ಒಳ್ಳೆಯವರನ್ನು ಒಯ್ಯಬಾರದೆಂದು ? ಗೌರಿಯನ್ನು ಆತನು ಹೀಗೆಯೆ ಒಯ್ಯಲಿಲ್ಲವೆ ? ಏನೋ ಏನೊ !"

ಊರಿಂದ ಕೂಗಳತೆಯ ಆಚೆಗೆ ಭಟ್ಟರ ತೋಟವಿತ್ತು. ಮೂವರು ಒಳಗೆ ಬಂದು ಬುಗ್ಗೆಯ ಬಳಿಯಲ್ಲಿ ಹಾಸುಗಲ್ಲಿನ ಮೇಲೆ ಕುಳಿತುಕೊಂಡರು. ಯದುಪತಿ ಸ್ವಲ್ಪ ಹೊತ್ತು ಅವರೊಡನಿದ್ದು ತೋಟದಲ್ಲಿ ಸುತ್ತಾಡಲು ಬಯಸಿ, " ತಾತಯ್ಯಾ, ತೋಟದಲ್ಲಿ ಸ್ವಲ್ಪ ಹೊತ್ತು ಸುತ್ತಾಡಿಕೊಂಡು ಬರಲಾ ? " ಎಂದನು. " ಹೋಗಿ ಬಾ, ಮಗು. ತಿರುಗಿ ಇಲ್ಲಿಗೆ ಬರುವಮುಂದೆ ಇಪ್ಪತ್ತು ಮೂವತ್ತು ಬದನೆಕಾಯಿ, ಹಿಡಿ ಮೆಂತೆಯ ಸೊಪ್ಪು, ಸ್ವಲ್ಪ ಕೊತ್ತುಂಬರಿ, ನಾಲ್ಕಾರು ನಿಂಬೆಯಹಣ್ಣುಗಳನ್ನು ತೆಗೆದುಕೊಂಡು ಬಾ, " ಎಂದು ಹೇಳಿ ಭಟ್ಟರು ಇಷ್ಟೆಲ್ಲವನ್ನು ತರಲು ಒಂದು ಬುಟ್ಟಿಯನ್ನು ಆತನಿಗೆ ಕೊಟ್ಟರು. ಯದುಪತಿ ಹೋದನು.

ಬಳಿಕ ಭಟ್ಟರು ಬೀರಣ್ಣನಿಗೆ ಎಂದರು, " ಬೀರಾ, ಹುಡುಗನು ಬುದ್ಧಿ

ವಂತನಾಗಿದ್ದಾನೆ. ಬೆಳಗಿನಿಂದ ಆತನನ್ನು ನಾನು ಸೂಕ್ಷ್ಮವಾಗಿ ಪರೀಕ್ಷಿಸಿದೆನು. ಮಾತಿನಲ್ಲಿ ವಿನಯವಿದೆ, ಕೆಲಸದಲ್ಲಿ ಅಚ್ಚುಕಟ್ಟುತನವಿದೆ. ಶಾಂತನಾಗಿದ್ದರೂ ಆತನು ಮುಗ್ಗಲಗೇಡಿಯಲ್ಲ. ಚಟುವಟಿಕೆಯಿದೆ ಆತನಲ್ಲಿ. ಮುಂದೆ ರಾಮಪುರದಲ್ಲಿ ಹೇಗೋ ಆತನದು? ಯಾರಾದರೂ ಆತನ ಜನರು ಅಲ್ಲಿ ಇರುವರೊ ?"

"ಆತನ ಸೋದರಮಾವನು ಇರುವರಂತೆ."

"ಎಲ್ಲಿ ಇರುವರೆಂಬುದನ್ನು ಆತನು ಬಲ್ಲನೊ ?"

"ಮುರಲೀಧರನ ಗುಡಿಯ ಹಿಂದೆ ಎಲ್ಲಿಯೋ ಅವರು ಇರುವರಂತೆ. ನಿಶ್ಚಿತವಾಗಿ ಎಲ್ಲಿ ಎಂಬುದು ಆತನಿಗೆ ಗೊತ್ತಿಲ್ಲ."

"ಅವರ ಹೆಸರೇನು ?"

"ಮದ್ದೂರು ಶೇಷಗಿರಿರಾಯರು."

"ನಿನಗೆ ಗೊತ್ತಿಲ್ಲವೆ ಅವರು ಯಾರೆಂಬುದು ?"

"ಇಲ್ಲ, ತಾತಯ್ಯಾ."

"ಅವರು ಯಾರೊ ? ಹೇಗಿರುವರೊ ? ಬಡವರೊ, ಸಿರಿವಂತರೊ ? ಹುಡುಗನನ್ನು ಕೇಳುವರೊ ಇಲ್ಲವೊ ? ಕೇಳಿದರೆ ಒಳಿತಾಯ್ತು; ಕೇಳದಿದ್ದರೆ ಹೇಗೋ, ಬೀರಾ ?"

"ತಾತಯ್ಯಾ, ಸತ್ತವರ ಮಕ್ಕಳು ಇದ್ದವರ ಕೈಯಲ್ಲಿ."

"ಸತ್ತವರ ಮಕ್ಕಳನ್ನು ಇದ್ದವರು ಹೇಗೆ ನೋಡಿಕೊಳ್ಳಬೇಕೊ ಹಾಗೆ ನೋಡಿಕೊಳ್ಳದಿದ್ದರೆ ?"

"ಇದ್ದವರಾದರೂ ಎಲ್ಲರೂ ತಮ್ಮ ಮಕ್ಕಳನ್ನು ಹೇಗೆ ನೋಡಿಕೊಳ್ಳಬೇಕು ಹಾಗೆ ನೋಡಿಕೊಳ್ಳುವರೆ ?"

"ಎಂದ ಬಳಿಕ, ಸತ್ತವರ ಮಕ್ಕಳೂ ಇದ್ದವರ ಮಕ್ಕಳೂ ಪರಮೇಶ್ವರನ ಕೈಯಲ್ಲಿ, ಬೀರಾ. ಪರಮೇಶ್ವರನ ಕೃಪೆ ಬೇಕು. ಯದುಪತೀ, ಪರಮೇಶ್ವರನ ಕೃಪೆ ನಿನಗಿರಲಿ ! ಪರಮೇಶ್ವರಾ, ಸಾವಿತ್ರಿಯನ್ನು ದೊಡ್ಡವಳನ್ನು ಮಾಡಿದೆ, ಬುದ್ಧಿವಂತಿಯನ್ನು ಮಾಡಿದೆ; ಹಾಗೆಯೆ ಯದುಪತಿಯನ್ನು ದೊಡ್ಡವನನ್ನು ಮಾಡು, ಬುದ್ಧಿವಂತನನ್ನು ಮಾಡು; ಸಾವಿತ್ರಿಗೆ ನೀನು ಗೌರಿಯನ್ನು ತಾಯಿಯಾಗಿಸಿದಂತೆ, ಪರಮೇಶ್ವರಾ, ಯದುಪತಿಗೆ......."

" ಸಾವಿತ್ರಿಯನ್ನು ತಾಯಿಯಾಗಿಸು, ದೇವದೇವಾ !"

" ಬೀರಾ, ಗೌರಿಗೆ ತಕ್ಕ ಅಳಿಯನು ನೀನು ! ತಾಯಿಯ ಮನೆಗೆ ನಡೆದಿರುವ ಶ್ರೀ ಸೂರ್ಯನಾರಾಯಣಾ ಸರಲ ಹೃದಯದ ಬೀರನ ಪ್ರಾರ್ಥನೆಗೆ ನೀನು ಸಾಕ್ಷಿಯಾಗಿರುವೆ !"

ಇಬ್ಬರೂ ಸೂರ್ಯನಾರಾಯಣನಿಗೆ ಭಕ್ತಿಯಿಂದ ತಲೆಬಾಗಿ ಕೈಮುಗಿದರು.

ಭಕ್ತಿಭಾವದಿಂದ ಪುಲಕಿತರಾಗಿ ಅವರು ಕುಳಿತಿರುವಾಗ ಯದುಪತಿ ಪಲ್ಲೆಯ ಗಂಟನ್ನು ಕೈಯಲ್ಲಿ ಹಿಡಿದುಕೊಂಡು ಅಲ್ಲಿಗೆ ಬಂದನು. ಬಳಿಕ ಮೂವರೂ ಮನೆಗೆ ತೆರಳಿದರು.

ಮರುದಿನ ಭಟ್ಟರು ಬಲು ಬೇಗನೆ ಎದ್ದು ಸ್ನಾನಮಾಡಿ ಅಡಿಗೆಯನ್ನು ಮುಗಿಸಿದರು. ಕಬೀರಸಾಹೇಬನೂ ಚಕ್ಕಡಿಯನ್ನು ತಂದು ನಿಲ್ಲಿಸಿದನು. ಎಲ್ಲರದೂ ಊಟವಾಯ್ತು. ಭಟ್ಟರು ಬುತ್ತಿಯ ಗಂಟನ್ನು ಒಂದು ಹೂಜಿಯಲ್ಲಿ ನೀರನ್ನು ತುಂಬಿ ಇಟ್ಟಿದ್ದರು. ಯದುಪತಿಗೋಸುಗ ಅಂಗಿ ಚೆಣ್ಣಗಳನ್ನು ಎರಡು ನೀರು ಪಂಚೆಗಳನ್ನು ಆತನ ಹಾಸಿಗೆಯಲ್ಲಿ ಸರಿಯಾಗಿರಿಸಿ ಅದನ್ನು ಸುತ್ತಿ ಕಟ್ಟಿಟ್ಟರು ಬೀರಣ್ಣನು ಸಾಮಾನುಗಳನ್ನು ಚಕ್ಕಡಿಯಲ್ಲಿ ಇಟ್ಟನು. ಯದುಪತಿ ಚಕ್ಕಡಿಯಲ್ಲಿ ಕೂಡುವ ಮೊದಲು ದೇವರಿಗೆ ನಮಸ್ಕಾರಮಾಡಿ ಬಂದು ಭಟ್ಟರ ಪಾದಗಳ ಮೇಲೆ ಹಣೆಯಿಟ್ಟನು ಆತನ ಕಣ್ಣುಗಳಿಂದ ಹನಿಗಳು ಉದುರಿದುವು. ಭಟ್ಟರು ಆತನ ತಲೆ ಬೆನ್ನುಗಳ ಮೇಲೆ ಕೈಯಾಡಿಸಿ, "ಮಗನೆ, ಚಿರಂಜೀವಿಯಾಗು, ಒಳ್ಳೆಯವನಾಗಿ ಬಾಳು. ಬೀರನು ಮತ್ತು ಸಾವಿತ್ರಿ ನಿನ್ನನ್ನು ನೋಡಿಕೊಳ್ಳುವರು. ಮಗು, ನಾನೂ ಆಗಾಗ ರಾಮಪುರಕ್ಕೆ ಬರುತ್ತಿರುವೆನು. ಎಲ್ಲರಿಗೂ ದೇವನು ಆಧಾರವು. ಅವನು ನಿನ್ನನ್ನು ಕೈಹಿಡಿದು ನಡೆಯಿಸುವನು. ಮಗನೆ, ಯದುಪತಿ, ಒಳ್ಳೆಯವನಾಗಿರು," ಎನ್ನುತ್ತ ಆತನನ್ನು ಚಕ್ಕಡಿಯಲ್ಲಿ ಕುಳ್ಳಿರಿಸಿದರು. ಬಳಿಕ ಅವರು ತಮ್ಮ ಕಾಲಿಗೆರಗಿದ ಬೀರಣ್ಣನನ್ನು ಹರಿಸಿ ಅವನೊಡನೆ ಚಕ್ಕಡಿಯಲ್ಲಿ ಕುಳಿತರು. ಚಕ್ಕಡಿ ಹೊರಟಿತು. ಅದು ತೋಟದ ಬಳಿಗೆ ಬರಲು, ಭಟ್ಟರು ಮತ್ತೊಮ್ಮೆ ಯದುಪತಿಯ ಮೆಯ್ಯಮೇಲೆ ಕೈಯಾ

ಡಿಸಿ, " ಬೀರಾ, ಮುಂದಿನವಾರ ನಾನು ರಾಮಪುರಕ್ಕೆ ಬರುವೆನು; ಯದುಪತಿ ಜೋಕೆ, " ಎಂದು ಹೇಳಿ ಕೆಳಗಿಳಿದರು, ಮತ್ತು ಕಬೀರ ಸಾಹೇಬನ ಬಳಿಗೆ ಬಂದು, " ಕಬೀರಾ, ಚಕ್ಕಡಿಯನ್ನು ಜೋಕೆಯಾಗಿ ನಡೆಯಿಸಣ್ಣಾ; ಇದೋ, ಕರೀಮನಿಗೆ ಒಲ್ಲಿಗೋಸುಗ. ರಾಮಪುರದಿಂದ ತಿರುಗಿ ಬರುವಾಗ ತರಲಿಕ್ಕೆ ಮರೆಯಬೇಡ, " ಎಂದು ಅವನ ಕೈಯಲ್ಲಿ ಐದು ರೂಪಾಯಿಗಳನ್ನು ಇಟ್ಟರು. ಒಲ್ಲೆನೆನ್ನಲು ಕಬೀರಸಾಹೇಬನಿಗೆ ಧೈರ್ಯವು ಸಾಲದೆ ಅವನು ಅದನ್ನು ತೆಗೆದುಕೊಂಡನು. ಚಕ್ಕಡಿ ಮುಂದೆ ನಡೆಯಿತು.

* * * *

## ೪

ರಾಮಪುರವು ಎರಡು ಲಕ್ಷ ಜನಸಂಖ್ಯೆಯ ದೊಡ್ಡ ಪಟ್ಟಣವು. ಅದು ವ್ಯಾಪಾರೋದ್ಯಮಗಳ ಮತ್ತು ವಿದ್ಯೆಯ ಕೇಂದ್ರವಾಗಿತ್ತು. ಹಳೆಯ ಊರು. ಈಗ ಅದು ಅನೇಕ ವಿಸ್ತರಣಗಳಿಂದ ಸುತ್ತಲು ವಿಸ್ತಾರಗೊಂಡಿತ್ತು.

ಮುದ್ದೂರು ಶೇಷಗಿರಿರಾಯರು ಒಂದು ವಿಸ್ತರಣದಲ್ಲಿ ವಾಸಿಸುತ್ತಿದ್ದರು. ಇದು ಹೊಸವಿಸ್ತರಣವು. ಶ್ರೀಮಂತ ವ್ಯಾಪಾರಸ್ಥರು ಮತ್ತು ದೊಡ್ಡ ಸಂಬಳದವರು ಅಲ್ಲಿ ಮನೆಗಳನ್ನು ಕಟ್ಟಿಸಿದ್ದರು. ಅವರೆಲ್ಲರೂ ಕೂಡಿ ಅಲ್ಲಿ ಒಂದೆಡೆಯಲ್ಲಿ ಮುರಲೀಧರನ ಗುಡಿಯನ್ನು ಕಟ್ಟಿಸಿದ್ದರು. ಈ ಗುಡಿಯ ಬಂದಿನ ಓಣಿಯಲ್ಲಿ ಮುದ್ದೂರು ಶೇಷಗಿರಿರಾಯರ ಮನೆಯಿದ್ದಿತು.

ಶೇಷಗಿರಿರಾಯರು ಒಂದು ಇಂಗ್ಲಿಶ್ ಕಂಪನಿಯ ಕಾರ್ಯಾಲಯದಲ್ಲಿ ಮುಖ್ಯ ಸಂಚಾಲಕರಾಗಿದ್ದರು ತಿಂಗಳೊಂದಕ್ಕೆ ನಾನೂರು ರೂಪಾಯಿ ಸಂಬಳ ಅವರಿಗಿದ್ದಿತು. ಅವರು ಇರುತ್ತಿದ್ದುದು ಅವರ ಸ್ವಂತದ ಮನೆ.

ರಾಮಪುರಕ್ಕೆ ಬಂದ ಮೂರನೆಯ ದಿನ ಮುಂಜಾವಿನಲ್ಲಿ ಬೀರಣ್ಣನು ಶೇಷಗಿರಿರಾಯರ ಮನೆಯನ್ನು ಗೊತ್ತುಹಚ್ಚಿದನು. " ಇದು ರಾಯರದು ಸ್ವಂತದ ಮನೆ ಎಂದ ಬಳಿಕ ಅವರು ಶ್ರೀಮಂತರಿರಲಿಕ್ಕೆ ಸಾಕು. ಯದುಪತಿಗೆ ಇಲ್ಲಿ ಆಶ್ರಯವು ದೊರೆತರೆ ಆತನು ಸುಖವಾಗಿ ಇರಬಹುದು. ಆದರೆ ಜನರು

ಹೇಗಿರುವರೊ ? ರಾಯರು ಹುಡುಗನನ್ನು ತಮ್ಮಲ್ಲಿ ಇಟ್ಟುಕೊಳ್ಳಲು ಒಪ್ಪಬಹುದೆ ? ಒಪ್ಪಬಹುದು. ಹುಡುಗನು ದೂರದವನಲ್ಲ, ಸೋದರಳಿಯನು. ಆದರೆ ಹೆಣ್ಣುಮಕ್ಕಳು ? ಗೌರಮ್ಮನವರಂತೆ ಎಲ್ಲರೂ ಇರುವುದಿಲ್ಲ. ಹೆಂಗುಸರು ದಯೆಯುಳ್ಳವರಾಗಿದ್ದರೆ ಆಶ್ರಿತರಿಗೆ ಸುಖವು. ಇಲ್ಲದಿದ್ದರೆ ಅವರ ಪಾಡು ಬೀದಿಯ ನಾಯಿಯ ಪಾಡು ! ಈ ಯೋಚನೆ ಈಗೇಕೆ ? ಹುಡುಗನು ಹೋಗಿ ರಾಯರನ್ನು ಕಂಡು ಬರಲಿ. ಆ ಬಳಿಕ ಮುಂದೇನಾಗುವುದೊ ನೋಡುವ. '' ಈ ಬಗೆಯಾಗಿ ಯೋಚಿಸುತ್ತ ಅವನು ತನ್ನ ಮನೆಗೆ ಬಂದನು. ಯದುಪತಿ ಆಗ ನಲ್ಲಿಯ ಮೇಲೆ ಸ್ನಾನಮಾಡಿ ಬಟ್ಟೆಗಳನ್ನು ಒಗೆದುಕೊಂಡು ಒಣಹಾಕಿ ಒಂದು ಪುಸ್ತಕವನ್ನು ಓದುತ್ತ ಕುಳಿತಿದ್ದನು. ಬೀರಣ್ಣನು ಬಂದುದನ್ನು ನೋಡಿ ಆತನು, " ಬೀರಣ್ಣಾ, ಮನೆ ಸಿಕ್ಕಿತೆ ? " ಎಂದು ಕೇಳಿದನು.

" ಸಿಕ್ಕಿತು, ದೂರವಿದೆ. ಸಾಯಂಕಾಲ ತೋರಿಸುವೆನು. ಹೋಗಿ ಬರುವೆಯಂತೆ. ಏನನ್ನಾದರೂ ತಂದೆಯಾ ? ಇಲ್ಲವೊ ? ಭಟ್ಟರುಕೊಟ್ಟಿರುವ ಬಾಳೆಹಣ್ಣುಗಳು ಇವೆಯಲ್ಲವೆ ? ಎರಡು ಹಣ್ಣುಗಳನ್ನು ತಿನ್ನು. ಹಾಲು ಕಾಯ್ದಿದೆಯಲ್ಲವೆ ? ಹಣ್ಣುಗಳನ್ನು ತಿಂದ ಬಳಿಕ ಸ್ವಲ್ಪ ಹಾಲನ್ನು ಕುಡಿ. ಇದೇ ಓಣಿಯಲ್ಲಿ ಮಾಧವಾಚಾರ್ಯರೆಂಬವರು ಒಬ್ಬರು ನನ್ನ ಪರಿಚಯದವರು ಇರುವರು. ಬಲು ಒಳ್ಳೆಯವರು. ರಾಧಮ್ಮನವರೂ ಒಳ್ಳೆಯವರು. ಬೆಳಗಿನಲ್ಲಿ ರಾಯರಮನೆಗೆ ಹೋಗುವಾಗ ನಾನು ಅವರನ್ನು ಕಂಡೆನು. ಗಂಡಹೆಂಡಿರಿಬ್ಬರೂ ನಿನ್ನನ್ನು ತಮ್ಮಲ್ಲಿಯೆ ಊಟಕ್ಕೆ ಕಳಿಸೆಂದು ಹೇಳಿದರು. ಈಗ ಹತ್ತು ಗಂಟೆ. ಇನ್ನೊಂದು ಗಂಟೆಗೆ ನಿನ್ನನ್ನು ಅವರಲ್ಲಿಗೆ ಕರೆಕೊಂಡು ಹೋಗುವೆನು ಊಟಮಾಡಿ ಬರುವೆಯಂತೆ. ಈಗ ನಾನು ಸ್ನಾನಮಾಡಿ ಅಡಿಗೆಯನ್ನು ಮಾಡಿಕೊಳ್ಳಲಾ ? ನೀನು ಮಾತನಾಡುತ್ತ ಕುಳಿತುಕೊಳ್ಳುವೆಯಂತೆ, " ಎಂದು ಹೇಳಿ ಬೀರಣ್ಣನು ಯದುಪತಿಗೆ ಹಾಲುಹಣ್ಣುಗಳನ್ನು ಕೊಟ್ಟು ಸ್ನಾನಕ್ಕೆ ಹೋದನು.

ಸಂಜೆಯ ಐದು ಗಂಟೆಗೆ ಬೀರಣ್ಣನು ಯದುಪತಿಯೊಡನೆ ಶೇಷಗಿರಿರಾಯರ ಮನೆಯ ಕಡೆಗೆ ಹೊರಟನು. ಯದುಪತಿ ದೊಡ್ಡಪಟ್ಟಣವನ್ನು ನೋಡಿದುದು ಇದುವೆ ಮೊದಲನೆಯ ಸಲವು. ಆ ದೊಡ್ಡ ಬೀದಿಗಳು, ದೊಡ್ಡ ಕಟ್ಟಡಗಳು, ಜನಸಂಮರ್ದವು, ಬಗೆಬಗೆಯ ವಾಹನಗಳು, ಈವರೆಗೂ ತಾನ

ಕಾಣದ ವೈಭವವು, ಈವರೆಗೂ ತಾನು ಕಾಣದ ದಾರಿದ್ರ್ಯವು, ಈವೈಭವ-ದಾರಿದ್ರ್ಯಗಳ ತಾಕಲಾಟದಿಂದ ಹುಟ್ಟಿದ ಅಂಶಾತಿ –ದಿಗ್‌ಭ್ರಮೆಯನ್ನು ಹುಟ್ಟಿಸುವ ಅಶಾಂತಿ–, ಇವೆಲ್ಲವನ್ನು ನೋಡುತ್ತ ನಡೆದಿರುವ ಯದುಪತಿಗೆ ಜಗತ್ತು ವಿಚಿತ್ರವಾಗಿ ತೋರಿತು. ಜನರು ಅಷ್ಟೊಂದು ಅವಸರದಿಂದ ಏಕೆ ನಡೆಯುರುವರೊ ಎಂಬುದನ್ನು ತಿಳಿಯಲು ಯತ್ನಿಸುತ್ತಿದ್ದ ಯದುಪತಿಗೆ ತಾನೇ ವೇಗದಿಂದ ನಡೆದಿದ್ದನೆಂಬ ಅರಿವು ಇರಲಿಲ್ಲ! ಬಿರುಗಾಳಿಯಲ್ಲಿ ಸಿಕ್ಕಿದ ತರಗೆಲೆಗಳಂತೆ ಎಲ್ಲರು ಯಾವದೋ ಒಂದು ಅಚಿಂತ್ಯವಾದ ಶಕ್ತಿಯ ಸೆಳೆತಕ್ಕೆ ಸಿಕ್ಕಿ ರಭಸದಿಂದ ಸಾಗಿದ್ದರು. ಜನರ ಈ ರಭಸಕ್ಕೆ, ಈ ಸಂರಂಭಕ್ಕೆ ಈ ಆಯಾಸಕ್ಕೆ ಕಾರಣವೆನಿರಬಹುದು? ತಮಗೆ ಇಲ್ಲದ ಸುಖವನ್ನು ಪಡೆಯಬೇಕೆಂಬ ಹಂಬಲೊ, ಅಥವಾ ತಮಗೆ ಇದ್ದ ಕಷ್ಟವನ್ನು ನೀಗಿಸಬೇಕೆಂಬ ಆತುರವೊ? ಅಥವಾ ಗುರಿಯಿಲ್ಲದ, ನಿಶ್ಚಿತ ಧ್ಯೇಯವಿಲ್ಲದ ಬದುಕೊ? ಹುಟ್ಟಿದತಪ್ಪಿಗಾಗಿ ಬದುಕಲೋಸುಗ ಪ್ರಾಣಿ ಇಷ್ಟೊಂದು ಸಂಭ್ರಮಣಶೀಲವಾಗಿರುವುದು ಯಾವ ನ್ಯಾಯವು? ದೇವನ ರಾಜ್ಯದಲ್ಲಿ ನ್ಯಾಯವಿದೆಯೆ? ಇದೆ, ನಿಶ್ಚಯವಾಗಿಯೂ ಇದೆ! ನಿರ್ಮಲದೃಷ್ಟಿಗೆ ಸತ್ಯವು ಕಾಣಿಸುವುದು ಆದರೆ ವಿಕಾರವಶವಾದ ದೃಷ್ಟಿಗೆ ಎಲ್ಲವು ವಿಪರೀತವಾಗಿ ತೋರುವುದು. ಭೂಮಿಯಲ್ಲಿ ಸಿಕ್ಕಿದ ಬೀಜದಲ್ಲಿಯ ಜೀವವು ಬೀಜವನ್ನು ಒಡೆದು, ಭೂಮಿಯನ್ನು ಸೀಳಿ, ಮೊಳಿಕೆನಾಗಿ ಮೇಲೆ ಬಂದು, ಸುತ್ತಲಿನ ಪ್ರಾಣಗಳನ್ನು ತನ್ನಲ್ಲಿ ಅಳವಡಿಸಿಕೊಂಡು, ವೃಕ್ಷವಾಗಿ, ನೆರಳೀಯುತ್ತ, ಹೂ-ಕಾಯಿ-ಹಣ್ಣುಗಳನ್ನು ಕೊಟ್ಟು ಜನ್ಮಸಾಫಲ್ಯವನ್ನು ಪಡೆಯಬೇಕಾದರೆ ಎಷ್ಟೊಂದು ಶ್ರಮಿಸಬೇಕಾಗುವುದು, ಎಷ್ಟೊಂದು ಪ್ರಯತ್ನಿಸಬೇಕಾಗುವುದು! ವಿಕಾಸವು –ಅಮರ್ಯಾದ ವಿಕಾಸವು– ಜೀವದ ಧರ್ಮವು. ಈ ವಿಕಾಸಕ್ಕೋಸುಗವೆ ಈ ರಭಸವು, ಈ ಸಂರಂಭವು, ಈ ಆಯಾಸವು! ನನಗೆ, ನಿನಗೆ ಈ ಮಾತಿನ ಸತ್ಯತೆ ಹೊಳೆಯಲಿಕ್ಕಿಲ್ಲ. ಆದರೆ ಕೆಲಮಟ್ಟಿಗೆ ವಿಕಾಸಗೊಂಡ ಮಾನವಪ್ರಾಣಿಯ ಅಂತರ್ದೃಷ್ಟಿ ಈ ಸತ್ಯವನ್ನು ಕಾಣದಿರದು. ಭೂಮಿಯನ್ನು ಭೇದಿಸಿ ಮೇಲೆ ಬಂದ ಬಳಿಕಲ್ಲವೆ ಮೊಳಿಕೆಯಾಗಿರುವ ಜೀವಕ್ಕೆ ಪ್ರಕಾಶದ ದರ್ಶನವು? ವಿಕಾಸವು ಜೀವದ ಧರ್ಮವಾಗಿರುವುದರಿಂದಲೇ ನಮ್ಮ ಕಲ್ಪನೆಗೂ ನಿಲುಕದ ತೇಜಸುಳ್ಳ ಮಹಾವಿಭೂತಿಗಳನ್ನು ಆಗಾಗ ಈ ಜಗತ್ತು ಕಾಣುವುದು. ಹಾಗೆ ಇರಲಿಲ್ಲವಾಗಿದ್ದರೆ ಜಗತ್ತು ಎಂದೋ

ನಿರ್ಜೀವವಾಗುತ್ತಿದ್ದಿತು. ಇಷ್ಟೊಂದು ಸಂವೇಗದ ಒತ್ತಡವನ್ನು ಮೆಟ್ಟಿ ಮುಂದುವರಿವ ಶಕ್ತಿ ಜೀವಕ್ಕೆ ಇರಬೇಕಾದರೆ ಜೀವವು ವಿಕಾಸಧರ್ಮಿಯೆ ಆಗಿರಲಿಕ್ಕೆಬೇಕು. ಮಾನವನೆ, ಇದನ್ನು ನೀನು ಬೇಗನೆ ಅರಿತಷ್ಟು ನಿನಗೆ ಕ್ಷೇಮವು.

ಬೀರಣ್ಣನೂ ಯದುಪತಿಯೂ ಮುರಲೀಧರ–ವಿಸ್ತರಣಕ್ಕೆ ಬಂದರು. ಮೊದಲು ಅವರು ಮುರಲೀಧರನ ಗುಡಿಗೆ ಬಂದು, ಒಳಗೆ ಹೋಗಿ, ದೇವರ ದರ್ಶನವನ್ನು ಮಾಡಿಕೊಂಡು ಗುಡಿಯ ತೋಟದಲ್ಲಿ ಒಂದು ಗಿಡದ ಕೆಳಗೆ ಸ್ವಲ್ಪ ಕುಳಿತು ಶೇಷಗಿರಿರಾಯರ ಮನೆಯ ಕಡೆಗೆ ನಡೆದರು. ರಾಯರ ಮನೆಯ ಮುಂದೆ ಚಿಕ್ಕದೊಂದು ಅಚ್ಚುಕಟ್ಟಾದ ತೋಟವಿತ್ತು. ತೋಟದ ಸುತ್ತಲು ಮೂರುಮೊಳ ಎತ್ತರದ ಗೋಡೆಯಿತ್ತು. ಗೋಡೆಯ ಮಧ್ಯದಲ್ಲಿರುವ ಬಾಗಿಲ ಬಳಿಗೆ ಅವರು ಬಂದ ಬಳಿಕ ಬೀರಣ್ಣನು ಯದುಪತಿಗೆ, "ತಮ್ಮಾ, ಯದುಪತೀ, ಒಳಗೆ ಹೋಗಿ ರಾಯರನ್ನು ಕಂಡು ಬಾ. ನಾನು ಗುಡಿಯ ತೋಟದಲ್ಲಿ ನಾವು ಕುಳಿತಿದ್ದೆವಲ್ಲ ಆ ಗಿಡದ ಕೆಳಗೆ ನಿನ್ನ ದಾರಿಕಾಯುತ್ತಿರುವೆನು. ಇನ್ನು ಒಳಗೆ ಹೋಗು. ದೊಡ್ಡವರ ಮನೆ. ಹೆದರಬೇಡ. ಕೇಳಿದ ಪ್ರಶ್ನೆಗಳಿಗೆ ಹೆದರದೆ ವಿನಯದಿಂದ ಸರಿಯಾಗಿ ಉತ್ತರಕೊಡು. ಹೋಗಿ ಬಾ," ಎಂದು ಹೇಳಿ ಆತನನ್ನು ಒಳಗೆ ಕಳುಹಿ ತಾನು ಗುಡಿಗೆ ಬಂದು ಅಲ್ಲಿ ಗಿಡದ ಕೆಳಗೆ ಕುಳಿತುಕೊಂಡನು

ಯದುಪತಿ ಬರುತ್ತಿರುವುದನ್ನು ಕಂಡು ಮನೆಯೊಳಗಿಂದ ನಾಲ್ವತ್ತು ನಾಲ್ವತ್ತೆರಡು ವರ್ಷದ ಸ್ತ್ರೀ ಯೊಬ್ಬರು ಬಾಗಿಲಹೊರಗೆ ಬಂದು ವರಾಂಡದಲ್ಲಿ ಒಂದು ಕುರ್ಚಿಯ ಮೇಲೆ ಕುಳಿತುಕೊಂಡರು. ಅವರನ್ನು ದೂರದಿಂದ ಕಂಡು ಯದುಪತಿ ಅವರು ತನ್ನ ಅತ್ತೆಯೆ ಇರಬೇಕೆಂದು ಭಾವಿಸಿ ನಮಸ್ಕಾರಮಾಡಲು ಮುಂದುವರಿವಷ್ಟರಲ್ಲಿ ಶಾರದಾಬಾಯಿ, "ಯಾರೋ ನೀನು ?" ಎಂದು ಕೇಳಿದರು. ಅವರ ಧ್ವನಿಯಲ್ಲಿ ಮಾರ್ದವವಿರಲಿಲ್ಲ. ಯದುಪತಿಗೆ ಅದು ಕರ್ಕಶವಾಗಿ ತೋರಿತು. ನಮಸ್ಕಾರಮಾಡುವುದನ್ನೇ ಆತನು ಮರೆತು ಬಿಟ್ಟನು. ಶಾರದಾಬಾಯಿ ಕೇಳಿದ ಪ್ರಶ್ನೆಗೆ ಆತನು ನಿಂತಲ್ಲಿಂದಲೇ, "ನಾನು ರಾಯರ ಸೋದರಳಿಯನು," ಎಂದು ಉತ್ತರವಿತ್ತನು.

"ಯಾವ ರಾಯರು ?"

" ಮುದ್ದೂರು ಶೇಷಗಿರಿರಾಯರು. "

" ಓ, ನೀನು ಆ ಕಮಲೆಯ ಮಗನೊ ?"

" ಅಹುದು, ತಾಯೀ, ನಾನು ಕಮಲಮ್ಮನ ಮಗನು. "

" ಆಕೆ ತನ್ನ ಗಂಡನು ಸತ್ತಬಳಿಕ ಇಲ್ಲಿಗೆ ಒಂದು ಪತ್ರವನ್ನು ಬರೆದಿದ್ದಳು. ನಾನೇ ಆ ಪತ್ರಕ್ಕೆ ಉತ್ತರ ಬರೆದೆನು:—' ನಮ್ಮಲ್ಲಿಗೆ ಮಗನನ್ನು ಕರೆಕೊಂಡು ಬಾ. ಅಡಿಗೆಮಾಡಿಕೊಂಡು ಇರುವೆಯಂತೆ ಇದರಿಂದ ನಮಗೂ ಅನುಕೂಲವು, ನಿನಗೂ ಅನುಕೂಲವು. ನಿನ್ನ ಮತ್ತು ನಿನ್ನ ಮಗನ ಹೊಟ್ಟೆಯ ಚಿಂತೆ ಹೋಗುವುದು. ಇದಲ್ಲದೆ ತಿಂಗಳೊಂದಕ್ಕೆ ನಿನಗೆ ಹತ್ತು ರೂಪಾಯಿಗಳನ್ನು ಕೊಡುವೆವು, ಮತ್ತು ವರ್ಷಕ್ಕೆ ಎರಡು ಮಡಿಸೀರೆಗಳನ್ನೂ ನಿನ್ನ ಮಗನಿಗೆ ಮೈ ತುಂಬ ಬಟ್ಟೆಗಳನ್ನೂ ಕೊಡುವೆವು. ನೀನು ಒಳ್ಳೆಯವಳಾಗಿರಬೇಕು. ' ಈ ನನ್ನ ಪತ್ರಕ್ಕೆ ಎಂಟು ಹತ್ತು ದಿನಗಳಾದ ಬಳಿಕ ಅವಳಿಂದ ಉತ್ತರವು ಬಂದಿತು:—' ನಾನು ಇಲ್ಲಿಯೆ ಚಿಕ್ಕಮಕ್ಕಳಿಗೋಸುಗ ಶಾಲೆಯನ್ನು ಮಾಡಿಕೊಂಡು ಇರುವೆನು. ಇಪ್ಪತ್ತು ಮೂವತ್ತು ಮಕ್ಕಳು ಬರಬಹುದು, ಇರುವವರು ನಾವು ಇಬ್ಬರು, ನಾನು ಮತ್ತು ಮಗನು. ಹೇಗಾದರೂ ಸಾಗಬಹುದು. ಏನಾದರೂ ಆಸತ್ತು ಒದಗಿದಲ್ಲಿ ನಿಮ್ಮ ಸಾಹಾಯ್ಯವನ್ನು ಅವಶ್ಯವಾಗಿ ಬೇಡುವೆನು. ' ಇದು ಆಕೆಯ ಉತ್ತರವು. ತಾನು ಕಲಿತವಳೆಂದು ಆಕೆಗೆ ಹೆಮ್ಮೆ. ನಮ್ಮಂತಹರ ಮನೆಯಲ್ಲಿ ಇರಲಿಕ್ಕೆ ದೈವವು ಬೇಕಲ್ಲವೆ ? ಆಕೆ ಬರಲಿಲ್ಲ. ಎರಡುವರ್ಷಗಳು ಹೋದುವು. ಹೋದ ತಿಂಗಳು ಅವಳು ಸತ್ತಳೆಂದು ಯಾರದೊ ಪತ್ರವು ಬಂದಿತು. "

" ಆ ಪತ್ರವನ್ನು ನೆರೆಮನೆಯ ನಾರಾಯಣರಾಯರು ಬರೆದಿದ್ದರು. "

" ಯಾರು ಬರೆದಿದ್ದರೊ ಬರೆದಿದ್ದರು ನೀನು ಇಲ್ಲಿಗೆ ಏಕೆ ಬಂದೆ ?"

" ವಿದ್ಯೆಕಲಿಯಲಿಕ್ಕೆ. "

" ದೊಡ್ಡ ಊರಲ್ಲಿ ವಿದ್ಯೆಕಲಿವುದು ಸುಮ್ಮನೆ ಆಗುವುದೊ ? ಬಡವರ ತುತ್ತಲ್ಲ. ಯಾರಲ್ಲಾದರೂ ಕೆಲಸ ಮಾಡಿಕೊಂಡಿದ್ದರೆ ನಾಲ್ಕು ರೂಪಾಯಿಗಳು ಬರುವುವು. ಡಾ. ಶ್ಯಾಮರಾಯರಿಗೆ ಒಬ್ಬ ಹುಡುಗನು ಬೇಕಂತೆ ನಿನಗೆ ಕೆಲಸಮಾಡುವ ಇಚ್ಛೆ ಇದ್ದರೆ ಹೇಳು, ನಾನು ರಮಾಬಾಯಿಗೆ ತಿಳಿಸುವೆನು. "

" ನಿಮ್ಮಲ್ಲಿಯೆ ನೀವು ಹೇಳಿದುದನ್ನು ಮಾಡಿಕೊಂಡು ಇರುವೆನು, ತಾಯೀ. ನನಗೆ ವಿದ್ಯೆಕಲಿಯಲು ಅನುಕೂಲವಮಾಡಿಕೊಡಿರಿ. "

" ನಿಮಗೇಕೆ ಬೇಕೋ ವಿದ್ಯೆ ? ಕಲಿವುದೆಂದರೆ ಸುಮ್ಮನೆ ಅಲ್ಲ. ದುಡ್ಡನ್ನು ಸುರಿಯಬೇಕಾಗುತ್ತದೆ. ನಿನ್ನಲ್ಲಿ ಇದೆಯೆ ದುಡ್ಡು ? ಅನುಕೂಲ ಮಾಡಿಕೊಡಬೇಕಂತೆ ! ಬಡವರಾಗಿ ಹುಟ್ಟಿದ ಬಳಿಕ ದುಡಿಯಬೇಕು. ಕಲಿವುದು ಕಟ್ಟುವುದು ದುಡ್ಡಿದ್ದವರ ಮಾತು. ನಿನಗೆ ಊಟಕ್ಕೆ ಹಾಕಿ; ಬಟ್ಟೆ ಬರೆಗಳನ್ನು ಮತ್ತು ಪುಸ್ತಕಗಳನ್ನು ಕೊಟ್ಟು ವಿದ್ಯೆಕಲಿಯಲು ನಿನಗೆ ಅನುಕೂಲ ಮಾಡಿಕೊಡಬೇಕಲ್ಲವೆ ? ನಾವು ಹೇಳಿದುದನ್ನು ಮಾಡಿಕೊಂಡು ಇರುವನಂತೆ! ನಿನಗೆ ಶಾಲೆಗೆ ಹೋಗಲು ವೇಳೆ ಬೇಡವೆ ? ಅಭ್ಯಾಸಕ್ಕೆ ವೇಳೆ ಬೇಡವೆ ? ನಾವು ನಿನಗೆ ಕೆಲಸವನ್ನು ಯಾವಾಗ ಹೇಳಬೇಕು, ನೀನು ಯಾವಾಗ ಮಾಡಬೇಕು ? ಕಲಿವವರಿಗೋಸುಗ ನಾವೇನೂ ಇಲ್ಲಿ ಅನ್ನಛತ್ರವನ್ನು ಇಟ್ಟುಕೊಂಡಿಲ್ಲ. ದುಡಿದುಕೊಂಡು ಇರುತ್ತಿದ್ದರೆ ಹೇಳು, ರಮಾಬಾಯಿಗೆ ತಿಳಿಸುವೆನು. "

" 'ಕಷ್ಟಪಟ್ಟಾದರೂ ವಿದ್ಯೆಕಲಿ. ಕಲಿತು ಒಳ್ಳೆಯವನಾಗಿ ಬಾಳು,, ಎಂದು ಅವ್ವನು ಸಾಯುವ ಕಾಲಕ್ಕೆ ನನಗೆ ಹೇಳಿದಳು. ಕಷ್ಟಪಡುವೆನು' ತಾಯೀ ! ರಾಯರನ್ನು ಕಾಣಬೇಕೆಂದು ಬಂದಿದ್ದೆನು. ಇನ್ನೂ ಅವರು ಬರಲಿಲ್ಲ, ಯಾವಾಗ ಬರಬಹುದು ?"

" ಯಾವಾಗ ಬರುವರೋ ಯಾರಿಗೆ ಗೊತ್ತು ? ನೀನು ಅವರನ್ನು ಕಾಣುವ ಅವಶ್ಯಕತೆ ಇಲ್ಲ, ನನ್ನನ್ನು ಕೇಳದೆ ಅವರು ನಿನ್ನನ್ನು ಮನೆಯಲ್ಲಿ ಇಟ್ಟುಕೊಳ್ಳಲಾರರಷ್ಟೇ ? ಡಾಕ್ಟರರ ಮನೆಯಲ್ಲಿ ಕೆಲಸಮಾಡಿಕೊಂಡು ಇರುವ ಇಚ್ಛೆ ನಿನಗೆ ಇದ್ದರೆ, ಇನ್ನೆರಡು ದಿನಗಳಲ್ಲಿ ಬಂದು ನನಗೆ ತಿಳಿಸು. ಒಲ್ಲೆಯಾದರೆ, ಪುನಃ ಈಮನೆಗೆ ನೀನು ಬರುವ ಕಾರಣವಿಲ್ಲ ! ಇನ್ನು ಹೋಗು, ನನಗೆ ಕೆಲಸವಿದೆ, " ಎಂದು ಹೇಳಿ ಶಾರದಾಬಾಯಿ ಒಳಗೆ ಹೋಗಿ ಬಿಟ್ಟರು.

ಯದುಪತಿ ಅಲ್ಲಿಂದ ಹೊರಟು ಬೀರಣ್ಣನೆಡೆಗೆ ನಡೆದನು. ಅತನು ತೋಟದ ಬಾಗಿಲನ್ನು ದಾಟಿ ಮುಂದೆ ಹೋಗುವಷ್ಟರಲ್ಲಿ ಎದುರಿನಿಂದ ಒಂದು ಟಾಂಗೆ ಬಂದು ಅದೇ ಬಾಗಿಲಿಂದ ಒಳಗೆಹೋಯ್ತು. ಅದರಲ್ಲಿ ಕುಳಿತಿದ್ದ ಪ್ರತಿಷ್ಠಿತ ಗೃಹಸ್ಥರೊಬ್ಬರನ್ನು ಕಂಡು ಯದುಪತಿ ಅವರು ತನ್ನ ಸೋದರ

ಮಾವನಿರಬಹುದೆಂದು ಊಹಿಸಿ ಬಾಗಿಲ ಹೊರಬದಿಗೆ ನಿಂತು ನೋಡಿದನು. ಟಾಂಗೆ ವರಾಂಡೆಯ ಮೆಟ್ಟಲುಗಳ ಬಳಿಯಲ್ಲಿ ನಿಂತಿತು. ಗೃಹಸ್ಥರು ಇಳಿದು ವರಾಂಡೆಯಲ್ಲಿ ಬರುವಷ್ಟರಲ್ಲಿ ಒಳಗಿನಿಂದ ಚಿಕ್ಕ ಹುಡಿಗೆಯೊಬ್ಬಳು ಬಂದು, "ಅಪ್ಪಾ, ಅಪ್ಪಾ," ಎನ್ನುತ್ತ ಕೈಹಿಡಿದು ಅವರೊಡನೆ ಒಳಗೆ ಹೋದಳು. ಯದುಪತಿ, "ಅವರು ನನ್ನ ಸೋದರಮಾವನೇ ಇರಲಿಕ್ಕೆ ಸಾಕು. ಈಗ ಹೋಗಿ ಅವರನ್ನು ಕಾಣಲಾ? ಅತ್ತೆ ನನಗೆ ಬರಬೇಡವೆಂದು ಹೇಳಿದ್ದಾರೆ. ಮತ್ತೆ ಹೋದರೆ ಅವರು ನನಗೆ ಬಯ್ಯಲಿಕ್ಕಿಲ್ಲವೆ?. ಬೀರಣ್ಣನನ್ನು ಕಂಡು ಆತನು ಹೋಗೆಂದು ಹೇಳಿದರೆ ಬಂದು ಕಾಣುವೆನು. ಈಗ ಬೀರಣ್ಣನ ಬಳಿಗೆ ಹೋಗುವ," ಎಂದು ಆಲೋಚಿಸಿ ಗುಡಿಗೆ ಬಂದನು.

ಬೀರಣ್ಣನು ತಾನು ಹೇಳಿದಂತೆ ಗಿಡದ ಕೆಳಗೆ ಕುಳಿತಿದ್ದನು. ಯದುಪತಿ ಅವನೆಡೆಗೆ ಬಂದು ಏನಾಯ್ತೆಂಬುದನ್ನು ಅವನಿಗೆ ತಿಳಿಸಿ, "ಮತ್ತೆ ಈಗ ಹೋಗಿ ರಾಯರನ್ನು ಕಾಣಲಾ?" ಎಂದು ಕೇಳಿದನು. ಬೀರಣ್ಣನು, "ಈತನು ಈಗ ಅತ್ತೆಯ ಚುಚ್ಚುಮಾತುಗಳಿಂದ ನೊಂದಿರುವನು. ರಾಯರ ಸ್ವಭಾವವು ಹೇಗಿದೆಯೊ? ಅವರೂ ಬಿರುಸುವಮಾತುಗಳನ್ನಾಡಿದರೆ? ಅಥವಾ ಅತ್ತೆ ಈತನಿಗೆ ಅವರನ್ನು ಕಾಣಗೊಡದೆ ಮತ್ತೆ ಬಯ್ದು ಕಳಿಸಿದರೆ? ಹೊಸ ನೋವಿಗೆ ಮತ್ತೆ ಪೆಟ್ಟು! ಈತನು ಈಗ ತಿರುಗಿ ಹೋಗದಿರುವುದೇ ಒಳಿತು. ಮಾಧವಾಚಾರ್ಯರನ್ನು ಕಂಡು ಮುಂದೆ ಏನುಮಾಡಬೇಕೆಂಬುದನ್ನು ಅವರೊಡನೆ ಆಲೋಚಿಸುವ," ಎಂದು ಮನಸ್ಸಿನಲ್ಲಿ ಯೋಚಿಸಿ, "ತಮ್ಮಾ ಯದುಪತಿ, ಈಗ ಅವರ ಮನೆಯ ಕಡೆಗೆ ಹೋಗುವುದು ಬೇಡ. ನಾನು ವಿಚಾರಮಾಡಿ ಹೇಳುವೆನು ಆಗ ಹೋಗುವೆಯಂತೆ," ಎಂದು ಆತನೊಡನೆ ಅಲ್ಲಿಂದ ಮನೆಯ ಕಡೆಗೆ ಹೊರಟನು.

ಶೇಷಗಿರಿರಾಯರ ಮನೆಯಲ್ಲಿ ನಡೆದ ಸಂಗತಿಯಿಂದ ಯದುಪತಿಯ ಮನಸ್ಸಿನಲ್ಲಿಯೂ ಬೀರಣ್ಣನ ಮನಸ್ಸಿನಲ್ಲಿಯೂ ಏನೇನೋ ವಿಚಾರಗಳು ಬಂದು ಅವರನ್ನು ಅಸ್ವಸ್ಥಗೊಳಿಸಿದುವು. ಆದುದರಿಂದ ಅವರು ಮಾತನಾಡದೆ ನಡೆದರು. ಹೀಗೆ ಅವರು ನಡೆದಿರುವಾಗ ನಾಲ್ಕು ಬೀದಿಗಳ ಒಂದು ಕೂಟದಲ್ಲಿ ದೀನಸ್ವರದಿಂದ ಕೂಗಿಕೊಳ್ಳುತ್ತ ಸುಳಿದಾಡುತ್ತಿರುವ ತಿರುಕರತ್ತ ಯದುಪತಿಯ ದೃಷ್ಟಿ ಹೊಯ್ತು. ಕೂಡಲೆ ಆತನು ಹೆದರಿಕೆಯಾದಂತಾಗಿ

ತನ್ನ ಕೈಯಲ್ಲಿದ್ದ ಬೀರಣ್ಣನ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡನು. ಹೀಗೇಕೆ ಆತನು ಮಾಡಿರಬಹುದೆಂದು ಬೀರಣ್ಣನು ಆತನ ಮುಖವನ್ನು ನೋಡಿದನು. ತಿರುಕರತ್ತ ನೋಡುತ್ತಿದ್ದ ಆತನ ಕಣ್ಣುಗಳಿಂದ ನೀರು ಧಾರೆಯಾಗಿ ಹರಿಯುತ್ತಿತ್ತು. ಯದುಪತಿಗೆ ಏನು ವೇದನೆಯೆಂಬುದು ಕೂಡಲೆ ಬೀರಣ್ಣನ ಲಕ್ಷ್ಯದಲ್ಲಿ ಬಂದಿತು. "ಅಯ್ಯೋ, ಪರದೇಶಿ ಮಗು! ಹೃದಯಕ್ಕೆ ದೊಡ್ಡ ಪೆಟ್ಟು ತಾಗಿದೆ. ಈ ತಿರುಕರ ಕೂಗು ಈತನ ಗಾಯದಲ್ಲಿ ಕಡ್ಡಿಯಾಡಿಸಿತಲ್ಲವೆ ?" ಎಂದು ಮನಸ್ಸಿನಲ್ಲಿ ಮಿಡುಗುತ್ತ ಯದುಪತಿಯ ಲಕ್ಷ್ಯವನ್ನು ಬೇರೆ ಕಡೆಗೆ ಎಳೆಯಲು ಬಯಸಿ ಅವನು, "ಯದುಪತೀ," ಎಂದನು.

"ಏನು, ಅಣ್ಣಾ ?"

"ಅದೊ, ಆ ಕಟ್ಟಡವು, ದೊಡ್ಡ ಕಟ್ಟಡವು. ನೋಡಿದೆಯಾ ?"

"ಆ ದೊಡ್ಡ ಬಯಲಲ್ಲಿ ನಡುವೆ ಇದೆ, ಅದುವೆ ಅಲ್ಲವೆ ?"

"ಆಹುದು, ಅದು ಶಾಲೆ ನೀನು ಹೋಗಬೇಕಾದುದು ಅಲ್ಲಿಯೆ."

"ಎಷ್ಟು ದೊಡ್ಡದಿದೆಯಲ್ಲ, ಅಣ್ಣಾ ?"

"ಅಂದು ನೀನು ಹೇಳಲಿಲ್ಲವೆ, 'ನಿಮ್ಮ ಊರಲ್ಲಿ ದೊಡ್ಡ ಶಾಲೆ ಇದೆ,' ಎಂದು? ಇನ್ನೂ ಇಂತಹ ನಾಲ್ಕು ಶಾಲೆಗಳು ಇರುವುವು. ಇವಲ್ಲದೆ ನೀನು ಇನ್ನೂ ದೊಡ್ಡವನಾದ ಬಳಿಕ ಮುಂದೆ ಕಲಿಯಲು ಬಯಸಿದರೆ ಮತ್ತೆ ಬೇರೆ ದೊಡ್ಡ ಶಾಲೆಗಳುಂಟು. ನಿನಗೆ ಎಷ್ಟು ಬೇಕು ಅಷ್ಟು ಕಲಿವೆಯಂತೆ."

"ಆದರೆ—"

ಯಾರೋ ಆಗ, "ಬೀರಣ್ಣಾ," ಎಂದು ಕೂಗಿದರು.

*  *  *  *

೫

ಬೀರಣ್ಣನನ್ನು ಕೂಗಿದವರು ಅವನು ಯದುಪತಿಗೆ ತೋರಿಸಿದ ಶಾಲೆಯ ಮುಖ್ಯಾಧ್ಯಾಪಕರು, ಪುರುಷೋತ್ತಮರಾಯರು. ಬೀರಣ್ಣನು

ನೋಡಿ ನಮಸ್ಕಾರಮಾಡಿದನು. ಅವರು ಎಂದರು, "ಬೀರಣ್ಣಾ, ನೀನು ಈ ಸಲ ಬಹಳೇ ಉತ್ತಮವಾಗಿ ಕೆಲಸಮಾಡಿರುವೆ. ನೂರಿಪ್ಪತ್ತು ಪುಸ್ತಕಗಳು; ಎಲ್ಲವನ್ನೂ ಚೆನ್ನಾಗಿ ಹೊಲಿದಿರುವೆ. ಬಲು ಚೆಂದಕಾಣಿಸುತ್ತವೆ. ನಮ್ಮ ಶಾಲೆಗೆ ಮೊನ್ನೆ ಒಬ್ಬರು ಐನೂರು ಪುಸ್ತಕಗಳನ್ನು ಕೊಟ್ಟಿರುವರು. ಅವುಗಳಲ್ಲಿ ಕೆಲವನ್ನು ಹೊಲಿದು ಸರಿಗೊಳಿಸಬೇಕು. ನಾಳೆ ಬೆಳಗಿನ ಎಂಟು ಗಂಟೆಗೆ ಶಾಲೆಗೆ ಬರುವೆಯಾ ? ಪುಸ್ತಕಗಳನ್ನು ನೋಡಿಕೊಂಡು ಹೊಲಿಯಬೇಕಾದುವನ್ನು ತೆಗೆದುಕೊಂಡು ಹೋಗುವೆಯಂತೆ. ಈ ಮಗು ಯಾರು, ಬೀರಣ್ಣಾ ?"

"ಈತನು ವಿದ್ಯೆಕಲಿಯಲಿಕ್ಕೆಂದು ಈ ಊರಿಗೆ ಬಂದಿದ್ದಾನೆ. ದೇವನಹಳ್ಳಿ ಈತನ ಊರು."

"ಇಲ್ಲಿ ಯಾರಲ್ಲಿಗೆ ಬಂದಿದ್ದಾನೆ ?"

"ತನ್ನ ಊರಿಂದ ಬರುತ್ತಿರುವಾಗ ಈತನು ದಾರಿಯಲ್ಲಿ ನನಗೆ ಕೂಡಿದನು. ಈಗ ನನ್ನಲ್ಲಿಯೆ ಇದ್ದಾನೆ."

"ಈತನ ಜನರು ಇಲ್ಲಿ ಯಾರಾದರೂ ಉಂಟೊ ?"

"ತಮ್ಮನೆಂದು ಯಾರು ಕರೆವರೊ ಅವರೆ ಈತನ ಜನರು."

"ಇದೇನು, ಹೀಗೆ ಹೇಳುವೆ ?"

"ತಂದೆತಾಯಿಯಿಲ್ಲದ ತಬ್ಬಲಿ ಈತನು."

"ಅಯ್ಯೋ ! ಮಗು, ನಿನ್ನ ಹೆಸರು ?"

"ಯದುಪತಿ."

"ನಿನ್ನ ತಂದೆಯ ಹೆಸರು ?"

"ಶ್ರೀಧರರಾಯರು."

"ಏನು ? ದೇವನಹಳ್ಳಿ ಶ್ರೀಧರನ ಮಗನೋ ನೀನು ? ಅವನೂ ನಾನೂ ಗೆಳೆಯರಯ್ಯಾ. ಇಬ್ಬರೂ ವಿದ್ಯಾನಗರಿಯಲ್ಲಿ ಕೂಡಿ ಕಲಿಯುತ್ತಿದ್ದೆವು. ಬಹು ಬುದ್ಧಿವಂತನು, ಬಲು ಒಳ್ಳೆಯವನು ಅವನು, ಬೀರಣ್ಣಾ. ಮಧುಪುರದಲ್ಲಿ ನನ್ನಂತೆಯೆ ಅವನು ಒಂದು ಶಾಲೆಯಲ್ಲಿ ಅಧ್ಯಾಪಕನಾಗಿದ್ದನು. ಒಮ್ಮೆ ನಾನು ಅವನಲ್ಲಿಗೆ ಹೋಗಿದ್ದೆನು. ಈಮಗು ಆಗ ನಾಲ್ಕು ವರ್ಷದವನಿದ್ದನು. ನನ್ನ ಬಳಿಯಲ್ಲಿ ನಮ್ಮೆಲ್ಲರ ಛಾಯಾಚಿತ್ರವಿದೆ.

ವಿಷಮಜ್ವರದಿಂದ ಅವನು ತೀರಿದನು. ಎರಡುವರೆ ಮೂರುವರ್ಷಗಳು ಆಗಿರ ಬಹುದು. ಅಲ್ಲವೆ, ಯದುಪತೀ ?''

" ಎರಡುವರೆ ವರ್ಷಗಳಾದುವು. "

" ಬೀರಣ್ಣಾ, ಯದುಪತಿಯ ಊಟವು ಎಲ್ಲಿ ?''

" ನಾಲ್ಕೈದು ದಿನ ಮಾಧವಾಚಾರ್ಯರಲ್ಲಿ ಉಣ್ಣುವನು. "

" ಸಂಗೀತ ಮಾಧವಾಚಾರ್ಯರಲ್ಲಿಯೆ ?"

" ಅಹುದು, ಸ್ವಾಮೀ. "

" ನಾಳೆ ನಮ್ಮ ಮಗುವನ್ನು ತೊಟ್ಟಿಲಲ್ಲಿ ಇಡುವರು. ಇದೇ ಈಗ ಮಾಧವಾಚಾರ್ಯರಿಗೆ ನಾಳೆ ಊಟಕ್ಕೆ ಔತಣವನ್ನು ಕೊಟ್ಟು ಬಂದಿರುವೆನು. ನೀನೂ ಬರಬೇಕು, ಬೀರಣ್ಣಾ; ಯದುಪತೀ, ನೀನೂ ಬಾರಯ್ಯಾ. ಬೀರಣ್ಣಾ, ನೀನು ಬೆಳಗಿನ ಎಂಟು ಗಂಟೆಗೆ ಯದುಪತಿಯೊಡನೆ ಬಂದು ಬಿಡು. ಪುಸ್ತಕ ಗಳನ್ನೂ ನೋಡುವೆಯಂತೆ. ನಾಳೆ ಬೇಗನೆ ಬನ್ನಿರಿ. ನನಗೆ ಕೆಲಸವಿದೆ. ನಾನು ಈಗ ಹೊರಡುವೆನು. "

ಬೀರಣ್ಣನೂ ಯದುಪತಿಯೂ ಒಪ್ಪಿಕೊಂಡು ಮತ್ತೆ ಮನೆಯ ಕಡೆಗೆ ನಡೆದರು. ತುಸು ಮುಂದೆ ಹೋದ ಬಳಿಕ ಯದುಪತಿ ಎಂದನು, " ಅಣ್ಣಾ, ನಾನು ಮಾಧುಕರಿಯನ್ನು ಮಾಡಿದರೆ ಹೇಗೆ ? ಅವ್ವನು ತಾನು ಸಾಯುವ ಹಿಂದಿನ ದಿನ ನನ್ನನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು ನಾನು ಹೇಗೆ ನಡೆದುಕೊಳ್ಳಬೇಕು ಎಂಬುದನ್ನು ಹೇಳುವಾಗ, ' ಯದುಪತಿ, ನೀನು ವಿದ್ಯಾ ವಂತರ ಮನೆಯಲ್ಲಿ ಹುಟ್ಟಿರುವೆ. ನೀನೂ ವಿದ್ಯಾವಂತನಾಗು, ಮಗನೆ. ನನ್ನ ಅಣ್ಣನ ಮನೆಯುವರಷ್ಟೇ ನನ್ನ ಆಪ್ತರೆಂಬವರು. ಅವರಲ್ಲಿ ನಿನಗೆ ಆಶ್ರಯವು ದೊರೆತರೆ ಒಳಿತಾಗುವುದು. ದೊರೆಯದಿದ್ದರೆ ಮಾಧುಕರಿಯನ್ನಾದರೂ ಮಾಡಿ ವಿದ್ಯೆಕಲಿ. ಕಲಿಯದೆ ಇರಬೇಡ. ಕಷ್ಟಪಟ್ಟಾದರೂ ವಿದ್ಯೆಕಲಿ. ಕಲಿತು ಒಳ್ಳೆಯ ವನಾಗಿ ಬಾಳು, ' ಎಂದು ಬುದ್ಧಿಹೇಳಿದಳು. ' ಅವ್ವಾ, ನೀನು ಹೇಳಿದಂತೆ ಮಾಡುವೆನು, ' ಎಂದು ನಾನು ಹೇಳಿದೆನು. ಅವ್ವನಿಗೆ ಸಮಾಧಾನವಾಯ್ತು. ಅಣ್ಣಾ, ನಾಡಿದಿನಿಂದ ನಾನು ಮಾಧುಕರಿಯನ್ನು ಮಾಡಲಾ ?"

" ಮಗು, ಈಗ ಈವಿಚಾರವು ಬೇಡ. ಇದೇ ಈಗ ನಮಗೆ ಊಟಕ್ಕೆ ಹೇಳಿದವರು ಆ ಶಾಲೆಯ ಮುಖ್ಯಾಧ್ಯಾಪಕರು. ನಾಳೆ ಅವರಲ್ಲಿಗೆ ಹೋದಾಗ

ಅವರೊಡನೆ ನಿನ್ನನ್ನು ಶಾಲೆಗೆ ಸೇರಿಸುವ ವಿಚಾರವನ್ನು ಮಾಡುವೆನು. ನೀನು ಶಾಲೆಗೆ ಹೋಗತೊಡಗಿದ ಬಳಿಕ ಉಳಿದ ವಿಚಾರವನ್ನು ಮಾಡೋಣವಂತೆ, ಮಗು, ನೀನು ವಿದ್ಯೆಕಲಿ, ಎಷ್ಟು ಬೇಕು ಅಷ್ಟು ಕಲಿ. ಚಿಂತಿಸಬೇಡ ಇದೊ, ಆಚಾರ್ಯರ ಮನೆಗೆ ಬಂದೆವು. ಒಳಗೆ ಹೋಗುವ. ಅಡಿಗೆಯಾಗಿದ್ದರೆ ಊಟ ಮಾಡುವೆಯಂತೆ. ”

ಬೀರಣ್ಣನು ಯದುಪತಿಯೊಡನೆ ಒಳಅಂಗಳದಲ್ಲಿ ಬಂದು, “ ಗುರುಗಳೇ ”, ಎಂದು ಮೆಲ್ಲನೆಯಲ್ಲಿ ಕೂಗಿದನು. ಮಾಧವಾಚಾರ್ಯರು ಬಂದು, “ ಬಾರಯ್ಯಾ, ಬೀರಣ್ಣಾ; ಬಾ, ಯದುಪತೀ, ” ಎನ್ನುತ್ತ ಅವ ರೊಡನೆ ಒಳಗೆ ಬಂದರು, ಮತ್ತು ಎಂದರು, “ ಅಡಿಗೆ ಆಗಿದೆ. ಆಕೆ ಹಸು ವನ್ನು ಕರೆಯಲು ಹೋಗಿದ್ದಾಳೆ. ಬಂದೊಡನೆ ಯದುಪತಿಯೂ ಗೋದಾ-ವರಿಯೂ ಊಟಮಾಡಲಿ. ಇಂದು ಶನಿವಾರವಲ್ಲವೆ ? ನನಗೆ ಸಂಜೆಯ ಊಟ ವಿಲ್ಲ. ನಿನಗೂ ಒಂದೂಟವು ಇಂದು, ಬೀರಣ್ಣಾ, ಇಲ್ಲಿಯೆ ಕೈಕಾಲುತೊಳೆ ದುಕೊಳ್ಳು. ನೀನು ಕೊಡಿಸಿದ ಹಸು ಚೆನ್ನಾಗಿದೆ, ಬೀರಣ್ಣಾ. ಹೈನದ ಹಸು. ಹೊತ್ತಿಗೆ ಎರಡು ಸೇರು ಹಾಲು ಕೊಡುತ್ತದೆ. ಬಹು ಸಭ್ಯಹಸು. ಆಕೆ ಬಂದೇ ಬಿಟ್ಟಳು, ” ಎಂದು, “ ಬೀರಣ್ಣನು ಬಂದಿದ್ದಾನೆ. ಅವನಿಗೂ ಇಂದು ಶನಿವಾರ, ” ಎಂದು ಹೆಂಡತಿಗೆ ಹೇಳಿದರು.

“ ಬಾ, ಬೀರಣ್ಣಾ, ನೀನೂ ಇಲ್ಲಿಯೆ ಕೈಕಾಲುತೊಳೆದುಕೊಳ್ಳು. ಹಸು ಚೆನ್ನಾಗಿದೆ, ಬೀರಣ್ಣಾ. ಬಹು ಸಾಧು. ಗೋಪಾಲನು ಹೊಸ್ತಿಲ ಬಳಿಯಲ್ಲಿ ಕುಳಿತಿದ್ದರೆ, ಅವನನ್ನು ಎತ್ತಿಕೊಂಡು ದಾರಿಮಾಡಿಕೊಡುವವರೆಗೆ ಅದು ಹೊರಗೇ ನಿಲ್ಲುತ್ತದೆ. ನೀನು ಕೊಡಿಸಿದ ಹಸು, ಬೀರಣ್ಣಾ; ಸಾಧುವಾಗಿರ ಬೇಕಲ್ಲವೆ ?” ರಾಧಾಬಾಯಿ ನಗುತ್ತ ಎಂದರು.

“ ಅಮ್ಮಾ, ನಿಮ್ಮ ಪುಣ್ಯವು. ಆಚಾರ್ಯರ ಸಂಗೀತವೂ ಅಂತಹದು ! ದಿನಾಲು ಅವರ ಸಂಗೀತವನ್ನು ಕೇಳಿ ಯಾರು ತಮ್ಮ ಒರಟುತನವನ್ನು ಬಿಡಲಿಕ್ಕಿಲ್ಲ ?”

“ ನೀನು ಮೃದಂಗಗಾರನಯ್ಯಾ; ಆಚಾರ್ಯರ ಸಂಗೀತವನ್ನು ನೀನ ಲ್ಲದೆ ಮತ್ತಾರು ಹೊಗಳಬೇಕು ? ಗೋದಾವರೀ, ಬೀರಣ್ಣನಿಗೆ ನೀರು

ತಂದುಕೊಡು. ಅವನು ಕೈಕಾಲುತೊಳೆದುಕೊಳ್ಳಲಿ. ಬಾ, ಯದುಪತೀ, ನೀನೂ ಕೈಕಾಲುತೊಳೆದುಕೊಳ್ಳು. ಗೋದಾವರಿಯೂ ನೀನೂ ಊಟವಮಾಡುವಿರಂತೆ."

ಯದುಪತಿ ಅಂಗಿಯನ್ನು ಕಳೆದಿಟ್ಟು ಒಳಗೆ ಹೋದನು. ಗೋದಾವರಿ ಎರಡು ತುಂಬಿದ ತಂಬಿಗೆಗಳನ್ನು ತಂದಿಟ್ಟಳು. ಬೀರಣ್ಣನು ಕೈಕಾಲುತೊಳೆದು ಕೊಂಡು ಬಂದು ಆಚಾರ್ಯರೊಡನೆ ಮಾತನಾಡುತ್ತ ಕುಳಿತನು.

"ಯದುಪತಿಯನ್ನು ಮುದ್ದೂರು ಶೇಷಗಿರಿರಾಯರ ಮನೆಗೆ ಕರೆಕೊಂಡು ಹೋಗಿದ್ದೆಯಾ, ಬೀರಣ್ಣಾ ?'' ಆಚಾರ್ಯರು ಕೇಳಿದರು.

'' ಹೋಗಿದ್ದೆನು, ಗುರುಗಳೇ. ನಾನು ಆತನನ್ನು ರಾಯರ ಮನೆಯಲ್ಲಿ ಕಳುಹಿಸಿ ಬಂದು, ಆತನು ತಿರುಗಿ ಬರುವ ವರೆಗೆ ಗುಡಿಯ ಆವಾರದಲ್ಲಿ ಕುಳಿತೆನು. ''

'' ರಾಯರು ಇದ್ದರೆ ?''

'' ಇರಲಿಲ್ಲವಂತೆ; ಅವರ ಹೆಂಡತಿ ಇದ್ದರಂತೆ. ''

'' ಏನಾಯ್ತು ?''

ಬೀರಣ್ಣನು ಎಲ್ಲ ವೃತ್ತಾಂತವನ್ನು ಹೇಳಿದನು, ಮತ್ತು ಎಂದನು, '' ಗುರುಗಳೇ, ಯದುಪತಿ ಮತ್ತೊಮ್ಮೆ ಹೋಗಿ ರಾಯರನ್ನು ಕಂಡರೆ ಹೇಗೆ ?"

'' ಇನ್ನು ರಾಯರನ್ನು ಆತನು ಕಾಣುವುದರಲ್ಲಿ ಅರ್ಥವಿಲ್ಲ, ಬೀರಣ್ಣಾ. ಹುಡುಗನನ್ನು ಇಟ್ಟುಕೊಳ್ಳಲು ಅವರು ಒಪ್ಪಬಹುದು. ಸಾಕ್ಷಾತ್ ಸೋದರಳಿಯನು, ನೋಡು. ಆದರೆ ಅವರ ಮನೆಯಲ್ಲಿ ಹುಡುಗನಿಗೆ ಸುಖವಾಗದು. ಅವರ ಹೆಂಡತಿಗೆ ಆತನ ವಿಷಯದಲ್ಲಿ ಸ್ವಲ್ಪವೂ ಪ್ರೇಮವಿಲ್ಲ. ಇಷ್ಟೇ ಅಲ್ಲ, ತಿರಸ್ಕಾರವಿದೆ. ತನ್ನ ಗಂಡನ ತಂಗಿಯನ್ನು, ಅದೇ ವಿಧವೆಯಾದವಳನ್ನು ಮರ್ಮಭೇದಕ ಶಬ್ದಗಳಿಂದ ನೋಯಿಸಲು ಹಿಂಜರಿಯದ ಸ್ತ್ರೀ ರಾಯರ ಹೆಂಡತಿ ! ಪರದೇಶಿ ಮಗುವಿಗೆ ಇಂತಹ ದುಷ್ಟ ಶಬ್ದಗಳನ್ನು ನುಡಿವ ಸ್ತ್ರೀಯ ಅಂತಃಕರಣವು ಅತ್ಯಂತ ಕಠೋರವಾದುದು. ಯದುಪತಿ ಅವರಲ್ಲಿ ಹೋಗಲಾಗದು. ಆತನು ಬೇರೆಯವರ ಸಾಹಾಯ್ಯದಿಂದಲೆ ಬೆಳೆಯಬೇಕು. ಇಂದು ನಾನು ಬಹು ಸೂಕ್ಷ್ಮವಾಗಿ ಆತನನ್ನು ಪರೀಕ್ಷಿಸಿದೆನು, ಆತನ ನಡೆ-ನುಡಿಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದೆನು. ಹುಡುಗನು ಬುದ್ಧಿಶಾಲಿಯಾಗಿರು

ವನು, ಸದ್ಗುಣಿಯಾಗಿರುವನು. ಇಂತಹ ಮಕ್ಕಳನ್ನು ಆಶ್ರಯವಿತ್ತು ಬೆಳೆಯಿಸಲು, ಬೀರಣ್ಣಾ, ಪುಣ್ಯವು ಬೇಕು. ಯದುಪತಿ ಬೆಳೆದು ದೊಡ್ಡವನಾಗಲಿ, ವಿದ್ಯಾವಂತನಾಗಲಿ, ಸಚ್ಛೀಲನಾಗಲಿ. ಆ ಸ್ತ್ರೀಗೆ ತನ್ನ ತಪ್ಪು ಗೊತ್ತಾಗಲಿ, ಪಶ್ಚಾತ್ತಾಪದಿಂದ ಆಕೆ ಪುನೀತೆಯಾಗಲಿ ! ಬೀರಣ್ಣಾ, ನಿನ್ನ ಕೈಗೆ ರತ್ನವು ದೊರೆತಿದೆ. ನೀನು ಪುಣ್ಯವಂತನು !''

" ಪೂಜ್ಯರೇ, ನಿಮ್ಮ ಅಮೃತಹಸ್ತವು ಮಗುವಿನ ತಲೆಯಮೇಲಿರಲಿ ! ನನಗೆ ನೀವು ಮಾರ್ಗದರ್ಶಕರಾಗಿರಿ !''

" ಯದುಪತಿಯ ಸಂವರ್ಧನೆಯ ಕಾರ್ಯದಲ್ಲಿ ಜಗನ್ನಿಯಂತನು ನಮ್ಮೆಲ್ಲರಿಗೂ ಮಾರ್ಗದರ್ಶಕನಾಗಲಿ !"

ಯದುಪತಿ ಊಟಮಾಡಿ ಕೈ ತೊಳೆದುಕೊಂಡು ಬಂದನು.

" ಬಾ, ಯದುಪತೀ. ಕುಳಿತುಕೊಳ್ಳು. ಅಡಿಗೆ ಸರಿಯಾಗಿತ್ತೆ ?'' ಆಚಾರ್ಯರು ಕೇಳಿದರು.

" ಎಲ್ಲವೂ ರುಚಿಯಾಗಿತ್ತು, ಸ್ವಾಮೀ. ಅವ್ವನ ಅಡಿಗೆ ಹೀಗೆಯೆ ಇರುತ್ತಿತ್ತು. "

ಗೋದಾವರಿ ಹೊರಗೆ ಬಂದು ತಂದೆಯನ್ನೂ ಬೀರಣ್ಣನನ್ನೂ ಫಲಾಹಾರಕ್ಕೆ ಕರೆದಳು.

" ಯದುಪತೀ, ಇದು ಚಿತ್ರದ ಪುಸ್ತಕವು, ನೋಡುತ್ತಿರು. ನಾವು ಈಗ ಬರುವೆವು, " ಎಂದು ಹೇಳಿ ಆಚಾರ್ಯರು ಬೀರಣ್ಣನೊಡನೆ ಒಳಗೆ ಹೋದರು.

ಬೀರಣ್ಣನು ತಾನು ಯದುಪತಿಯೊಡನೆ ಶೇಷಗಿರಿರಾಯರ ಮನೆಯಿಂದ ತಿರುಗಿ ಬರುತ್ತಿರುವಾಗ ಪುರುಷೋತ್ತಮರಾಯರನ್ನು ಕಂಡುದನ್ನೂ ತಮ್ಮಿಬ್ಬರಿಗೂ ಅವರು ಔತಣವಿತ್ತುದನ್ನೂ ಆಚಾರ್ಯರಿಗೆ ತಿಳಿಸಿದನು, ಮತ್ತು ಎಂದನು, " ಯದುಪತಿಯ ತಂದೆ ಶ್ರೀಧರರಾಯರು ಪುರುಷೋತ್ತಮರಾಯರ ಪರಮ ಮಿತ್ರರಂತೆ, ಅವರೂ ಇವರೂ ವಿದ್ಯಾನಗರಿಯಲ್ಲಿ ಕೂಡಿ ಕಲಿತರಂತೆ. ಶ್ರೀಧರರಾಯರು ಬಲು ಒಳ್ಳೆಯವರಾಗಿದ್ದರಂತೆ. ಎರಡುವರೆ ವರ್ಷಗಳ ಹಿಂದೆ ಅವರು ವಿಷಮಜ್ವರದಿಂದ ತೀರಿದರಂತೆ. ಇದೆಲ್ಲವು ನನಗೆ ಪುರುಷೋತ್ತಮ

ರಾಯರಿಂದ ಗೊತ್ತಾಯ್ತು. ಗುರುಗಳೆ, ಈ ಮಿತ್ರತ್ವದ ಸಂಭಂಧವು ಯದುಪತಿಯ ಮಾರ್ಗದಲ್ಲಿಯ ಎಷ್ಟೋ ತೊಂದರೆಗಳನ್ನು ದೂರಗೊಳಿಸಲಿಕ್ಕಿಲ್ಲವೆ ?"

"ದೂರಗೊಳಿಸಬಹುದು, ಬೀರಣ್ಣಾ. ಪರಮಾತ್ಮನ ಯೋಜನೆಗಳು ಅಚಿಂತ್ಯವಾಗಿರುವುವು. ಪ್ರಾಣಿ ಎಲ್ಲಿಯೋ ಹುಟ್ಟುತ್ತದೆ, ಎಲ್ಲಿಯೋ ಬೆಳೆಯುತ್ತದೆ, ಯಾವಯಾವುವೊ ಹೊಸಹೊಸ ಸಂಬಂಧಗಳಲ್ಲಿ ಬರುತ್ತದೆ. ಕೆಲವು ಸಂಬಂಧಗಳಿಂದ ಅದು ಸಂಕೋಚಗೊಳ್ಳುವಂತೆಯೂ ಬೇರೆ ಕೆಲವು ಸಂಬಂಧಗಳಿಂದ ವಿಕಾಸಗೊಳ್ಳುವಂತೆಯೂ ತೋರುತ್ತದೆ. ಆದರೆ ಒಂದು ಮಾತು ದೃಢವು:—ನಿತ್ಯವಿಕಾಸವು ಜೀವದ ನಿತ್ಯ ಕಾರ್ಯವಾಗಿರುತ್ತದೆ, ನಿತ್ಯ ಧರ್ಮವಾಗಿರುತ್ತದೆ. ಅಧೋಗತಿಯಲ್ಲಿ ತೊಳಲುತ್ತಿರುವ ಜೀವದ ಒದ್ದಾಟವು ಊರ್ಧ್ವಗತಿಯನ್ನೈದಲು ಅದು ಮಾಡುವ ಪ್ರಯಾಸವಲ್ಲದೆ ಬೇರೆ ಏನೂ ಅಲ್ಲ. ನಾವು ತಿಳಿದ ಮಟ್ಟಿಗೆ ನಮ್ಮ ಮತ್ತು ಇತರರ ಮಾರ್ಗವನ್ನು ಸುಗಮ ಮಾಡುತ್ತ ಜೀವಿಸುವುದು ನಮ್ಮ ಕರ್ತವ್ಯವು. ಎಲ್ಲರೊಡನೆ ಮುನ್ನಡೆಯಲು ನಾವು ಯತ್ನಿಸುತ್ತಿರಬೇಕಲ್ಲದೆ, ಇತರರ ಗೊಡವೆ ನಮಗೇಕೆಂದು ಅವರನ್ನು ಕಡೆಗಣಿಸಿ ಮುನ್ನಡೆಯಲು ನಾವು ಯತ್ನಿಸುವುದರಿಂದ ನಮಗೆ ಯಾವ ಲಾಭವೂ ಇಲ್ಲ. ಒಂದು ಜೀವವೂ ಹಿಂದುಳಿದರೂ ನಮ್ಮ ಪ್ರಗತಿಯಲ್ಲಿ ಅಷ್ಟು ಕೊರತೆ ಎಂಬ ಮಾತನ್ನು ನಾವು ಮರೆಯಲಾಗದು. ನಾವೆಲ್ಲರೂ—ದುರ್ಬಲರು ಮತ್ತು ಬಲವಂತರು—ಒಡಗೂಡಿ ಮಾದೇವನ ಅಡಿಯನ್ನು ಕಾಣಲು ನಡೆದಿರುವೆವು. ತಿಳಿದವರು ದಾರಿಯನ್ನು ಸರಿಗೊಳಿಸುತ್ತ ನಡೆಯಬೇಕು ಕವಿಯ ಈ ವಚನವು ಮನನೀಯವಾಗಿದೆ:—

ತಡೆಗಳನು ಬದಿಗಿರಿಸಿ, ದಾರಿಯನು ಸರಿಗೊಳಿಸಿ,
ನಡೆಯೊ ಹಾಸುತೆ ನೀನು ನಡೆಮಡಿಯನು ||
ನಡೆವುದೋ ನಿನ್ನಡಿಯ ಕೆಳಗೆ ತನ್ನಂಗಯ್ಯ—
ನಿಡುತೆ ಸುಕೃತವು ನೀನು ಕೃತಕೃತ್ಯನೆಂದು ! || "

ಆಚಾರ್ಯರ ಮತ್ತು ಬೀರಣ್ಣನ ಫಲಾಹಾರವು ಮುಗಿಯಿತು. ಕೈತೊಳೆದುಕೊಂಡು ಇಬ್ಬರೂ ಹೊರಗೆ ಬಂದರು. ಯದುಪತಿಗೆ ಗಾಢನಿದ್ರೆ. ಬೀರಣ್ಣನು ಸ್ವಲ್ಪ ಹೊತ್ತು ಕುಳಿತು ಮನೆಗೆ ಹೋಗಲು ಎದ್ದು ಯದುಪತಿಯನ್ನು ಎಚ್ಚರಿಸಬೇಕೆನ್ನುವಷ್ಟರಲ್ಲಿ ಆಚಾರ್ಯರು ಎಂದರು, " ಬೀರಣ್ಣಾ,

ಹುಡುಗನು ಇಲ್ಲಿಯೆ ಮಲಗಿಕೊಳ್ಳಲಿ. ಹಾಸಿಗೆಹಾಸಿ ಮಲಗಿಸುವೆನು. ನಾಳೆ ಬೇಗನೆ ಬಾ. ಮೂವರೂ ಕೂಡಿ ಪುರುಷೋತ್ತಮರಾಯರಲ್ಲಿಗೆ ಹೋಗುವ."

"ಹಾಗೆಯೆ ಆಗಲಿ," ಎಂದು ಬೀರಣ್ಣನು ಆಚಾರ್ಯರ ಅಪ್ಪಣೆಯನ್ನು ಪಡೆದು ತನ್ನ ಮನೆಗೆ ಬಂದನು.

* * * *

೬

ಮರುದಿನ ಬೆಳಗಿನಲ್ಲಿ ಪುರುಷೋತ್ತಮರಾಯರು ಪೆಟ್ಟಿಗೆಯೊಳಗಿಂದ ಒಂದು ಛಾಯಾಚಿತ್ರವನ್ನು ಹೊರಗೆ ತೆಗೆದು ಅದನ್ನು ಸ್ವಚ್ಛವಾಗಿ ಒರಸಿ ತಮ್ಮ ಮೇಜಿನ ಮೇಲಿಟ್ಟರು. ಬಳಿಕ ಅವರು ಒಳಗೆ ಹೋಗಿ ಕೈಕಾಲುಗಳನ್ನು ತೊಳೆದುಕೊಂಡು ಬಂದು ಕುರ್ಚಿಯಲ್ಲಿ ಕುಳಿತು ಆ ಚಿತ್ರವನ್ನು ನೋಡತೊಡಗಿದರು. ಹಿಂದಿನ ದಿನಗಳು ಅವರಿಗೆ ನೆನಪಾದುವು. "ಶ್ರೀಧರಾ, ನಿನ್ನ ಸೌಜನ್ಯವು ಎಂತಹರನ್ನೂ ವಶಮಾಡಿಕೊಳ್ಳುತ್ತಿತ್ತು. ನನ್ನ ಸ್ವಭಾವವು ಬಲು ಸಿಟ್ಟಿನದು. ಎಷ್ಟೋ ಸಲ ನಿನ್ನ ವಿಷಯದಲ್ಲಿ ತಪ್ಪುತಿಳುವಳಿಕೆಯನ್ನು ಮಾಡಿಕೊಂಡು ಬಿರುಸು ಮಾತುಗಳನ್ನು ನಿನಗೆ ನಾನು ಆಡಿದುದುಂಟು. ಆದರೆ ನೀನು ಸಮಾಧಾನದಿಂದ ಸಹಿಸುತ್ತಿದ್ದೆ ಮತ್ತು ಅತ್ಯಂತ ಶಾಂತರೀತಿಯಿಂದ ನನ್ನ ತಪ್ಪನ್ನು ತೋರಿಸಿಕೊಡುತ್ತಿದ್ದೆ. ನಾಚಿಕೆಯಾಗಿ ನಾನು ತಲೆಬಾಗಿದರೆ, 'ಇದೇನೋ, ಪುರುಷೋತ್ತಮಾ, ನಾನೂ ನೀನೂ ಒಂದೇ ಅಲ್ಲವೆ? ನೊಂದುಕೊಳ್ಳಬೇಡವಯ್ಯಾ. ನೀನು ನೊಂದರೆ ನನಗೂ ನೋವಾಗುವುದಿಲ್ಲವೆ?' ಎಂದು ನನ್ನನ್ನು ಸಮಾಧಾನಗೊಳಿಸುತ್ತಿದ್ದೆ. ನಾನು ಭಾವನಾವಶನಾಗಿದ್ದೆನು. ಆದರಿಂದ ಒಮ್ಮೊಮ್ಮೆ ನನ್ನ ವಿವೇಕವು ಹೋಗುತ್ತಿತ್ತು. ಆಗ ನೀನು ಕಠೋರನಾಗಲು ಹಿಂಜರಿಯದೆ ನನ್ನಲ್ಲಿ ವಿವೇಕವನ್ನು ಹುಟ್ಟಿಸುತ್ತಿದ್ದೆ. ಎಂತಹ ಮಿತ್ರನನ್ನು ನಾನು ಕಳೆದುಕೊಂಡೆನೊ! ನನಗೆ ಪ್ಲೇಗು ಬಂದಾಗ ನನಗೋಸುಗ ನೀನು ಪಟ್ಟ ಶ್ರಮವು ಅಷ್ಟಿಷ್ಟೇ? ನನ್ನ ತಾಯಿಗೆ ನೀನು ಹಿರಿಯ ಮಗನಾಗಿದ್ದೆ, ಶ್ರೀಧರಾ! ತನಗೆ ಇಬ್ಬರು ಮಕ್ಕಳೆಂದು ಹೇಳಿ ನೀನು ಹಿರಿಯಮಗನೆಂದು ಹೇಳಿಕೊಳ್ಳಲು ಎಷ್ಟು ಅಭಿಮಾನಪಡುತ್ತಿದ್ದಳು ಅವಳು!

ಅವಳು ಸಾಯುವಾಗ ತಲೆಯಿಟ್ಟದ್ದು ನಿನ್ನ ತಲೆಯಮೇಲೆ!" ಪುರುಷೋತ್ತಮ ರಾಯರ ಕಣ್ಣುಗಳಲ್ಲಿ ನೀರು ಉಕ್ಕಿ ಬಂದಿತು. ಸ್ವಲ್ಪ ಹೊತ್ತು ತಡೆದು ಮತ್ತೆ ಅವರು ಎಂದರು, "ನೀನು ತೀರಿದೆಯೆಂದು ಅತ್ತಿಗೆಯ ಪತ್ರದಲ್ಲಿ ಓದಿ ಆಘಾತವಾದರೂ, ನಾನು ಕೂಡಲೆ ನಂಬಲಿಲ್ಲ. 'ಇಂತಹ ಸಾಧು ಪುರುಷನು ಇಷ್ಟು ಬೇಗನೆ ಸಾಯುವುದುಂಟೇ ? ನಾನು ಹೇಗೆ ನಂಬಲಿ ?' ಎಂದೆನು, ಈಗಲೂ ಎನ್ನುತ್ತಿರುವೆನು. ಶ್ರೀಧರಾ, ನನ್ನ ಅಂತಃಕರಣದಲ್ಲಿ ನೀನು ಶಾಶ್ವ-ತವಾಗಿ ಇರುವೆ, ನಿನ್ನ ಮಗನಲ್ಲಿ ಉಳಿದಿರುವೆ, ನಿನ್ನ ಹೆಸರು ಇಂದು ಹೆಸರಿಟ್ಟುಕೊಳ್ಳುವ ನನ್ನ ಮಗನಲ್ಲಿ ಉಳಿವುದು,—" ದೂರದಿಂದ ಮಾಧವಾಚಾ-ರ್ಯರ ಧ್ವನಿ ಕೇಳಿಸಿತು. ಪುರುಷೋತ್ತಮರಾಯರು ಅವರನ್ನು ಸ್ವಾಗತಿಸಲು ಹೊರಗೆ ಬಂದು ನಿಂತರು. ಮಾಧವಾಚಾರ್ಯರೂ ಬೀರಣ್ಣನೂ ಯದುಪತಿಯೂ ಬಂದರು. ಪುರುಷೋತ್ತಮರಾಯರು ಮೂವರನ್ನೂ ಒಳಗೆ ಕರೆತಂದು ಕುಳಿರಿಸಿ, ಯದುಪತಿಗೆ, "ಬಾ, ಯದುಪತೀ, ನೀನು ತಮ್ಮನನ್ನು ನೋಡುವೆಯಂತೆ," ಎಂದೆನ್ನುತ್ತ ಆತನನ್ನು ಒಳಗೆ ಒಯ್ದು, "ಯದುಪತಿ ಬಂದಿರುವನು," ಎಂದು ಬಾಣಂತಿಗೆ ಹೇಳಿದರು.

"ಬಾರಯ್ಯ ಯದುಪತೀ," ಬಾಣಂತಿ ಆತನನ್ನು ಒಳಗೆ ಕರೆದಳು ಆತನು ಒಳಗೆ ಹೋಗಿ ಕುಳಿತ ಬಳಿಕ ಪುರುಷೋತ್ತಮರಾಯರು ತಮ್ಮ ಕೋಣೆಗೆ ಬಂದು ಮಿತ್ರರೊಡನೆ ಮಾತನಾಡುತ್ತ ಕುಳಿತರು.

ಒಳಗೆ ಬಾಣಂತಿ ಯದುಪತಿಗೆ ಎಂದರು, "ಯದುಪತೀ, ನೀನ್ನು ದೊಡ್ಡವನಾಗಿರುವೆ. ನಾವು ಮಧುಪುರಕ್ಕೆ ನಿಮ್ಮಲ್ಲಿಗೆ ಬಂದಾಗ ನೀನು. ಇನ್ನೂ ಚಿಕ್ಕವನಿದ್ದೆ. ಇಗೊ, ಇಲ್ಲಿ ಬಂದಳಲ್ಲ ಈ ದಮಯಂತಿ, ಇವಳಷ್ಟು ಇದ್ದೆ. ಬಾ, ದಮಯಂತೀ, ಅಣ್ಣನ ಬಳಿಯಲ್ಲಿ ಕುಳಿತುಕೊಳ್ಳು."

"ನೀನು ಅಣ್ಣನೇ ?" ನಾಲ್ಕುವರ್ಷದ ದಮಯಂತಿ ಯದುಪತಿಯನ್ನು ಕೇಳಿದಳು.

"ಅಹುದಮ್ಮಾ; ನಾನು ಅಣ್ಣನು, ನೀನು ತಂಗಿ."

"ನಿನಗೆ ಪೀಪೀಮಾಡಲಿಕ್ಕೆ ಬರುತ್ತದೊ ? ಬರುತ್ತದಂತೆ. ಹಾಗಾದರೆ ಇದೊ ಬಾಳೆಯಲೆ; ಪೀಪೀಮಾಡಿಕೊಡು."

ಯದುಪತಿ ಪೀಪೀಮಾಡಿ, ಅದು ಬಿಚ್ಚಬಾರದೆಂದು ಅದಕ್ಕೆ ಬಾಳೆಯ ನಾರನ್ನು ಸುತ್ತಿ ಕಟ್ಟಿಕೊಟ್ಟನು. ದಮಯಂತಿ ಅದನ್ನು ಬಾಯಲ್ಲಿ ಇಟ್ಟು ಕೊಂಡು ಪೀ ಽ ಽ ಽ ಽ ಎಂದು ಊದುತ್ತ ಹೊರಗೆ ಓಡಿ ಬಿಟ್ಟಳು. ಮಲಗಿದ್ದ ಮಗು ಸಪ್ಪಳಕ್ಕೆ ಎಚ್ಚತ್ತು ಅಳತೊಡಗಿತು.

" ಮಗುವನ್ನು ಕೊಡುವಿರಾ ? ಎತ್ತಿಕೊಳ್ಳುವೆನು, " ಯದುಪತಿ ಎಂದನು.

" ಹೊಟ್ಟೆಗೆ ಕೊಟ್ಟು ಕೊಡುವೆನು, ತಡೆ. ಎಳಮಗು; ಎತ್ತಿಕೊಳ್ಳಲು ಬರುತ್ತದೋ ನಿನಗೆ ?"

" ಬರುತ್ತದೆ. ನೆರೆಮನೆಯ ರಂಗಕ್ಕನ ಮಗುವನ್ನು ಎತ್ತಿಕೊಳ್ಳುತ್ತಿದ್ದೆನು. ಅವ್ವನೊಡನೆ ದಿನಾಲು ಸಂಜೆಯ ಅಗ್ಗಿಷ್ಟಿಗೆಯ ಹೊತ್ತಿಗೆ ರಂಗಕ್ಕನ ಮನೆಗೆ ಹೋಗುತ್ತಿದ್ದೆನು. ಅವ್ವನು ಅಗ್ಗಿಷ್ಟಿಗೆಯನ್ನು ಹೊತ್ತಿಸಿ ಕೊಟ್ಟ ಬಳಿಕ ರಂಗಕ್ಕನು ಮಗುವನ್ನು ನನ್ನ ತೊಡೆಯಮೇಲೆ ಮಲಗಿಸಿ ಕಾಸಿಕೊಳ್ಳಲು ಕೂಡುತ್ತಿದ್ದರು. ನಾನು ಅಲ್ಲಿಯೇ ಕೋಣೆಯ ಹೊರಗೆ ಬಾಗಿಲ ಬಳಿಯಲ್ಲಿ ಕುಳಿತುಕೊಳ್ಳುತ್ತಿದ್ದೆನು. ಕಾಸಿಕೊಳ್ಳುವುದಾದಮೇಲೆ ಅವರು ಮಗುವನ್ನು ಎತ್ತಿಕೊಳ್ಳುತ್ತಿದ್ದರು, ನಾನು ತಿರುಗಿ ಮನೆಗೆ ಬರುತ್ತಿದ್ದೆನು. "

ಚಿಕ್ಕಮಕ್ಕಳು ಹೊಸಬರ ಮನೆಗೆ ಬಂದರೆ ಅವರಲ್ಲಿ ಪರಕೀಯ ಭಾವನೆ ಬಹಳ ಹೊತ್ತು ಉಳಿವುದಿಲ್ಲ. ಮನೆಯವರು ಅಂತಃಕರಣವುಳ್ಳವರಿದ್ದರಂತು ಅಲ್ಪಾವಧಿಯಲ್ಲಿ ಆ ಮನೆ ಇವರದೇ ಆಗುತ್ತದೆ. ಕಾಲು ಗಂಟೆಯಲ್ಲಿ ಯದುಪತಿ ತಾನು ಆ ಮನೆಯಲ್ಲಿ ಪರಕೀಯನೆಂಬುದನ್ನೆ ಮರೆತುಬಿಟ್ಟನು. ಲಕ್ಷ್ಮೀಬಾಯಿಗೂ ಆತನ ವಿಷಯದಲ್ಲಿ ಸ್ವಕೀಯತೆ ಎನಿಸಲು ಬಹಳ ಹೊತ್ತು ಬೇಕಾಗಲಿಲ್ಲ. ಹುಟ್ಟಿದಾಗಿನಿಂದ ತಾವಿಬ್ಬರೂ ಒಂದೇ ಮನೆಯವರೆಂಬಂತೆ ಅವರಿಬ್ಬರಲ್ಲಿ ಮಾತುಕತೆಗಳು ನಡೆದುವು.

ಹೊರಗೆ ಪುರುಷೋತ್ತಮರಾಯರ ಕೋಣೆಯಲ್ಲಿ ಯದುಪತಿಯನ್ನು ಕುರಿತು ಮಾತುಗಳು ನಡೆದಿದ್ದುವು. ಪುರುಷೋತ್ತಮರಾಯರು ಎಂದರು.

" ನೋಡಿದೆಯಾ, ಬೀರಣ್ಣಾ, ಈ ಛಾಯಾಚಿತ್ರವನ್ನು !"

" ನೋಡಿದೆನು. ಶ್ರೀಧರರಾಯರ ಮುಖದ ಮುಗುಳ್ನಗೆಯಲ್ಲಿ ಎಷ್ಟೊಂದು ಒಳ್ಳೆಯತನವಿದೆ !"

" ಅಹುದಯ್ಯ, ಬಲು ಒಳ್ಳೆಯವನು ಅವನು. "

" ಅವರ ಹೆಂಡತಿಯೂ ಎಷ್ಟು ಒಳ್ಳೆಯವರಾಗಿ ತೋರುವರು !"

" ಅವರೂ ಒಳ್ಳೆಯವರಾಗಿದ್ದರು, ಬೀರಣ್ಣಾ, ನಾವು ಮಧುಪುರದಲ್ಲಿ ಅವರಲ್ಲಿ ಇದ್ದಾಗ ಕಮಲಮ್ಮನೂ ಲಕ್ಷ್ಮಿಯೂ ಅಕ್ಕತಂಗಿಯರಂತೆ ಇದ್ದರು. ಆ ಸಾಧ್ವಿಯ ನುಡಿಯಲ್ಲಿ ಸವಿ, ನಡೆಯಲ್ಲಿ ವಿನಯ, ಕೆಲಸದಲ್ಲಿ ಅಚ್ಚುಕಟ್ಟು ತನ ಇದ್ದಿತು. ಆ ಗಂಡ–ಹೆಂಡಿರ ಜೀವನವು ಎರಡು ಪ್ರೇಮ ಝರಿಗಳ ಮಧುರ ಸಂಗಮದಂತಿತ್ತು. ಆಚಾರ್ಯರೇ, ಲಕ್ಷ್ಮಿಯೂ ನಾನೂ ಅವರ ಸಹವಾಸದಲ್ಲಿ ಎಷ್ಟೊಂದು ಮಾತುಗಳನ್ನು ಕಲಿತೆವು !"

" ಮಾನವರು ಬುದ್ಧಿವಂತರಾಗುವುದು ಹೀಗೆಯೆ, ರಾಯರೆ. ನಾವು ಸನ್ಮಿತ್ರರ ಸಹವಾಸದಲ್ಲಿ ಇರುವಾಗ ಒಬ್ಬರೊಬ್ಬರ ಸಾತ್ತ್ವಿಕ ಪ್ರವೃತ್ತಿಗಳ ಪರಿಣಾಮವು ಒಬ್ಬರೊಬ್ಬರ ಆಚಾರವಿಚಾರಗಳ ಮೇಲೆ ಆಗಿ ಪರಸ್ಪರರಲ್ಲಿಯ ದೋಷಗಳು ಅಳಿದು ಸತ್‌ಪ್ರವೃತ್ತಿಗಳು ಬಲಗೊಳ್ಳಲು ಅನುಕೂಲವಾಗುತ್ತದೆ. ಮಾನವನ ಪ್ರಗತಿಯಾಗುತ್ತಿರುವುದು ಹೀಗೆಯೆ. ರಾಯರೆ, ನಿಮ್ಮ ಆ ಮಿತ್ರರೂ ಒಳ್ಳೆಯವರು, ನೀವೂ ಒಳ್ಳೆಯವರು. ಅವರಿಂದ ನಿಮಗೆ ಉಪಕಾರ ವಾದಂತೆ ನಿಮ್ಮಿಂದಲೂ ಅವರಿಗೆ ಉಪಕಾರವಾಗಿರಲಿಕ್ಕೆ ಸಾಕು. ನೀವು ಅವರ ಲ್ಲಿದ್ದು ತಿರುಗಿ ಬರುವ ಅವಧಿಯಲ್ಲಿ ಅವರ ಮತ್ತು ನಿಮ್ಮ ಸಾತ್ತ್ವಿಕತೆ ಹಚ್ಚಿ ರಲಿಕ್ಕೆ ಸಾಕು. ಮಾನವನ ಮಾನವತೆಯ ವಿಕಾಸಕ್ಕೆ ಸತ್ಸಹವಾಸವು ಅವಕಾ ಶವನ್ನು ಕಲ್ಪಿಸುವುದೆಂದು ಹಿರಿಯರು ಹೇಳುವುದು ಅಕ್ಷರಶಃ ಸತ್ಯವು," ಆಚಾ ರ್ಯರು ಎಂದರು.

" ಗುರುಗಳೆ, ಇಷ್ಟು ಒಳ್ಳೆಯವರು ಶ್ರೀಧರರಾಯರು ಮತ್ತು ಅವರ ಪತ್ನಿ ಕಮಲಮ್ಮನವರು; ಆದರೆ ಇಷ್ಟು ಬೇಗನೆ ಈ ರೀತಿಯಾಗಿ ಚಿಕ್ಕಮಗು ವನ್ನು ಪರದೇಶಿಮಾಡಿ ಹೋಗಬೇಕೆ ?" ಬೀರಣ್ಣನು ಎಂದನು.

" ಬೀರಣ್ಣಾ, ಯದುಪತಿ ಪರದೇಶಿಯಾದುದೇನೋ ನಿಜವು. ಆದರೆ ನಮ್ಮೊಡನೆ ಆತನ ಸಂಬಂಧವು ಬಂದಿರುವುದಲ್ಲ ? ಪರಮಾತ್ಮನ ಉದ್ದೇಶವು ಏನಿರಬಹುದೊ ?" ಪುರುಷೋತ್ತಮರಾಯರು ಎಂದರು.

" ಆತನ ಸಂವರ್ಧನೆಯ ಹೊಣೆಯನ್ನು ನಾವು ವಹಿಸಬೇಕೆಂದು !" ಆಚಾರ್ಯರೆಂದರು

" ಆಚಾರ್ಯರೇ, ಇದು ನಿಮ್ಮ ನಿಶ್ಚಿತ ಅಭಿಪ್ರಾಯವಷ್ಟೇ ?"

" ನನಗೆ ಅನಿಶ್ಚಿತವಾಗಿರುವುದನ್ನು ನಿಶ್ಚಯದ ರೂಪದಲ್ಲಿ ಹೇಳುವವನು ನಾನಲ್ಲವೆಂದು, ರಾಯರೇ, ನೀವು ಬಲ್ಲಿರಿ !"

" ಆಚಾರ್ಯರ ನಿಶ್ಚಯದ ಬಲವು ನಮಗೆ ಬಲಕಾರಿಯಾಗಲಿ ! ನನ್ನ ಮಿತ್ರನ ಮಗನು ಇನ್ನು ಪರದೇಶಿಯಲ್ಲ, ಆಚಾರ್ಯರ ಆಶೀರ್ವಾದದಿಂದ ಆತನು ಸನಾಥನಾದನು !"

" ಆದರೆ, ಪುರುಷೋತ್ತಮರಾಯರೇ, ಹೊಣೆ ಸಣ್ಣದಲ್ಲ. ಬಲವನ್ನು ಕೊಡು ಎಂದು ವಿಶ್ವಾತ್ಮನನ್ನು ನಾವು ಪ್ರಾರ್ಥಿಸುವ !"

ಒಳಗಿನಿಂದ ಹಾಡಿನ ಧ್ವನಿ ಅವರ ಕಿವಿಗೆ ಬಂದಿತು.

ರಾಗ:—**ಮಧ್ಯಮಾವತಿ.**

ಹೊಲಕೆ ಬೀಜವು ಬೇಕು, ಮಳೆಬಿಸಿಲು ಬೇಕು;
ಹೊಲಗೆಲಸವೆಲ್ಲವೂ ಹಸನು ಬೇಕು || ಪಲ್ಲವಿ ||

ಕಸವು ತುಂಬಿದ ಭೂಮಿ, ಮಿಡಿತೆಯಿಲಿಗಳ ಭೂಮಿ,
ಹುಸಿಬಿತು ಗಳಿಗೊಡಲನಿತ್ತ ಭೂಮಿ ||
ಬಿಸಿಲು ಕಾಯದ ಭೂಮಿ, ಕವಣೆಗಾಣದ ಭೂಮಿ,
ಹಸಿಯ ಇಲ್ಲದ ಭೂಮಿ ಬೀಳು ಭೂಮಿ || ೧ ||

ಹೃದಯದಲಿ, ತಂದೆ, ಮಾನವತೆಯನು ಬಿತ್ತಿ, ನೀ—
ವನದ ಪೋಷಣವನ್ನೊಪ್ಪಿಸಿದೆಯೆನಗೆ ||
ಒದವಿಸಯ್ಯಾ, ಕರುಣಿ, ಕರುಣೆಯನು; ನೀನು ಹೊರಿ—
ಸಿದ ಹೊಣೆಗೆ ಸಾಲದೈ ಎನ್ನ ಬಲವು || ೨ ||

ನೀನು ಹೊಲದೊಡೆಯನೈ, ಬೆಳೆಯನುಣ್ಣುವ ಸ್ವಾಮಿ
ನೀನೆ, ವಿಶ್ವಾತ್ಮ ! ನಿನ್ನಾಳು ನಾನು ! ||
ನೀನಿತ್ತುದೇ ಭಾಗ್ಯವೆನುತೆ ದುಡಿವೆನು ! ಎನ್ನ
ಮಾನವನ್ನು ಕಾಯುವುದು ನಿನ್ನ ಹೊಣೆಯೋ ! || ೩ ||

ಹಾಡಿನ ಧ್ವನಿ ಮನೆಯಲ್ಲಿ ಎಲ್ಲೆಲ್ಲಿಯೂ ವ್ಯಾಪಿಸಿತು, ಮತ್ತು ವಾತಾವರಣವನ್ನು ಪವಿತ್ರವಾಗಿಸಿತು. ಆಚಾರ್ಯರು ಎಂದರು, "ಈ ಹಾಡು ನಮ್ಮ ಪ್ರಾರ್ಥನೆ. ಇದು ನಮ್ಮ ಹೊಣೆಯ ಮಹತ್ತ್ವವನ್ನು ತಿಳಿಸಿದುದಲ್ಲದೆ ಹೊಣೆ ಬಂದುದು ಪರಮಾತ್ಮನಿಂದೆಂತಲೂ, ಹೊಣೆಯನ್ನು ಹೊರಲು ನಮಗೆ ಶಕ್ತಿ ಸಾಲದೆಂತಲೂ ಅದಕ್ಕಾಗಿ ಕರುಣಿಯಾದ ಪರಮಾತ್ಮನು ನಮಗೆ ಕರುಣೆಯನ್ನು ಒದಗಿಸಬೇಕೆಂತಲೂ ನಮ್ಮ ಅಂತಃಕರಣವು ಹೇಳಬೇಕಾದುದನ್ನು ಬಹು ಮಧುರವಾಗಿ ಹೇಳಿತು. ಯದುಪತಿಯ ಸಂವರ್ಧನಕ್ಕಾಗಿ ನಾವು ಯಾವ ಭಾವದಿಂದ ವರ್ತಿಸಬೇಕೆಂಬುದನ್ನು ಕೊನೆಯ ನುಡಿ ಸ್ಪಷ್ಟವಾಗಿಸಿತು. ಯದುಪತಿ ನಮಗೆ ನಿಕ್ಷೇಪರೂಪವಾಗಿ ದೇವನಿಂದ ಬಂದ ವಸ್ತು. ಆತನನ್ನು ಪೋಷಿಸಿ ನಾವು ನಮ್ಮಲ್ಲಿ ದೇವನು ಬಿತ್ತಿದ ಮಾನವತೆಯನ್ನು ವಿಕಾಸಗೊಳಿಸಬೇಕಾಗಿದೆ. ನಿಕ್ಷೇಪದ ಒಡೆಯನು ವಿಶ್ವಾತ್ಮನು. ಬೆಳೆಯನುಣ್ಣುವ ಸ್ವಾಮಿಯೂ ಅವನೇ. ನಾವು ಅವನ ಆಳಾಗಿ ದುಡಿದು ಅವನ ನಿಕ್ಷೇಪವನ್ನು ಸುಂದರವಾಗಿಸುವುದು ನಮ್ಮ ಕರ್ತವ್ಯವು. ಈಶ್ವರಾರ್ಪಣ ಬುದ್ಧಿಯಿಂದ ಕರ್ತವ್ಯವನ್ನು ಮಾಡುವುದು ನಮ್ಮ ಹೊಣೆ, ನಮ್ಮಿಂದ ಕರ್ತವ್ಯವನ್ನು ಮಾಡಿಸಿ ನಮ್ಮ ಮಾನವನ್ನು ಕಾಯುವುದು ಅವನ ಹೊಣೆ! ಹೊಣೆಯನ್ನು ಹೊರಿಸಿದ ದೇವದೇವಾ, ನಿನ್ನ ಹೊಣೆ ಹೆಚ್ಚಿನದು! नमोऽस्तुते। नमोऽस्तुते। नमोऽस्तुते।

ಸ್ವಲ್ಪ ಹೊತ್ತು ಎಲ್ಲರೂ ಮೌನದಿಂದಿದ್ದರು. ಬಳಿಕ ಆಚಾರ್ಯರು ಮತ್ತೆ ಎಂದರು, "ಯದುಪತಿಯೆ ಹಾಡಿರಬೇಕಲ್ಲವೆ? ಎಂತಹ ಮಧುರ ಧ್ವನಿ!"

"ಆತನೇ ಹಾಡಿರಲಿಕ್ಕೆ ಸಾಕು," ಪುರುಷೋತ್ತಮರಾಯರು ಎಂದರು, "ಆತನ ತಾಯಿ ಕಮಲಮ್ಮನ ಧ್ವನಿಯೂ ಹೀಗೆಯೆ ಮಧುರವಾಗಿತ್ತು. ಆದುದರಿಂದ ಶ್ರೀಧರನು ಅವರನ್ನು "ಕಿನ್ನರಿ" ಎಂದು ಕರೆಯುತ್ತಿದ್ದನು. ನೋಡಿದೆಯಾ, ಬೀರಣ್ಣಾ, ಎಷ್ಟು ಬೇಗನೆ ಲಕ್ಷ್ಮಿ ಮಕ್ಕಳನ್ನು ವಶಮಾಡಿಕೊಳ್ಳುವಳು. ಈಗಾಗಳೇ ಅವಳೂ ಯದುಪತಿಯೂ ಅಕ್ಕತಮ್ಮಂದಿರಾಗಿರುವರು. ಕಮಲಮ್ಮನ ಹಾಡುಗಳನ್ನು ಕೇಳಿ ಆನಂದಪಟ್ಟ ಲಕ್ಷ್ಮಿ ಯದುಪತಿಯೂ

ಅವರಷ್ಟೆ ಸರಸವಾಗಿ ಹಾಡಬಲ್ಲನೆಂದು ಊಹಿಸಿ ಆತನಿಗೆ ಒಂದು ಹಾಡನ್ನು ಹೇಳಲು ಹೇಳಿರಬಹುದು, ಮತ್ತು ಆತನು ಹಾಡಿರಬಹುದು. ''

" ಎಷ್ಟು ಸವಿಯಾಗಿ ಆತನು ಹಾಡಿದನು ನೋಡಿರಿ! ಮತ್ತು ತಾಳ ವನ್ನು ಬಿಡದೆ ಹಾಡಿದನು, ಸ್ವಲ್ಪವೂ ಅಪಸ್ವರವಿಲ್ಲ. ಗುರುಗಳೆ, ಯದುಪತಿ ನಿಮಗೆ ಯೋಗ್ಯನಾದ ಶಿಷ್ಯನಾಗಬಲ್ಲನಲ್ಲವೆ ?'' ಬೀರಣ್ಣನು ಎಂದನು.

" ಅಹುದಯ್ಯಾ ಬೀರಣ್ಣಾ, ನಾನೂ ಅದನ್ನೆ ಯೋಚಿಸುತ್ತಿದ್ದೆನು. ಯದುಪತಿಯ ಧ್ವನಿಯಲ್ಲಿ ಅಪೂರ್ವವಾದ ಮಾಧುರ್ಯವಿದೆ, ಮತ್ತು ಶೈಲಿ ಯಲ್ಲಿ ವಿಲಕ್ಷಣವಾದ ಕೌಶಲ್ಯವಿದೆ. ಸಂಗೀತವು ಈತನಿಗೆ ಸಂಪೂರ್ಣವಾಗಿ ವಶವಾಗುವುದೆಂಬುದಕ್ಕೆ ಸಂದೇಹವಿಲ್ಲ. ಗುರುತ್ವವನ್ನು ನಾನು ವಹಿಸಲಾ, ಬೀರಣ್ಣಾ ?''

" ಗುರುಗಳೆ, ನೀವು ಗುರುತ್ವವನ್ನು ವಹಿಸಿದರೆ ಸಂಗೀತ ಶಾಸ್ತ್ರಕ್ಕೆ ಉಪ ಕಾರವಾಗುವುದು !"

" ಕುಶಲನಾದ ಶಿಷ್ಯ, ಪ್ರಸನ್ನರಾದ ಗುರು; ಇದು ಅಪೂರ್ವ ಯೋಗವು !'' ಪುರುಷೋತ್ತಮರಾಯರೆಂದರು.

" ಹಾಗಾದರೆ, ನಾಳೆಯೆ ಯದುಪತಿಯ ಸಂಗೀತದ ಅಭ್ಯಾಸಕ್ಕೆ ಆರಂಭವು. ನಾಳೆ ನೀವಿಬ್ಬರೂ ನನ್ನಲ್ಲಿ ಊಟಕ್ಕೆ ಬನ್ನಿರಿ, ವಿದ್ಯಾರಂಭದ ದಿನವು, '' ಆಚಾರ್ಯರು ಗಂಭೀರವಾಗಿ ನುಡಿದರು.

ಪುರುಷೋತ್ತಮರಾಯರು ಮತ್ತು ಬೀರಣ್ಣನು ಆಮಂತ್ರಣವನ್ನು ಆನಂದದಿಂದ ಸ್ವೀಕರಿಸಿದರು. ಬಳಿಕ ಬೀರಣ್ಣನು ಎಂದನು, " ರಾಯರೇ, ಯದುಪತಿಯನ್ನು ಶಾಲೆಗೆ ಸೇರಿಸುವುದು ಎಂದು ?"

" ಅದೂ ನಾಳೆಯೆ, ಬೀರಣ್ಣಾ. ಆಚಾರ್ಯರ ಅನುಮೋದನೆ ಇರು ವುದಷ್ಟೇ !''

" ಶುಭಸ್ಯ ಶೀಘ್ರಂ, ಎರಡೂ ನಾಳೆಯಿಂದ ಆರಂಭವಾಗಲಿ. ಬೀರಣ್ಣಾ, ನನ್ನ ಮನೆ ಇದ್ದುದರಲ್ಲಿ ದೊಡ್ಡದಿದೆ. ಒಂದು ಕೋಣೆಯನ್ನು ಯದುಪತಿಗೆ ಕೊಡುವೆನು. ದಿನಾಲು ಆತನು ಅರುಣೋದಯದ ಹೊತ್ತಿಗೆ ಎದ್ದು ಸ್ವಲ್ಪ

ವೇಳೆ ಸಂಗೀತವನ್ನು ಕಲಿಯಲಿ. ಬಳಿಕ ಆತನು ಬೇರೆ ಕೆಲಸಕ್ಕೆ ಸ್ವತಂತ್ರನು. ಬೀರಣ್ಣಾ, ಒಂದು ಮಾತು. ಆತನಿಗೆ ಅನ್ನವು ಮಾಧುಕರಿಯ ಅನ್ನವು. ಹೊಟ್ಟೆಗಾಗಿ ಆತನು ಯಾರ ಹಂಗಿನೊಳಗೂ ಇರಲಾಗದು. ಅನುವು-ಆಪತ್ತಿಗೆ ನಾವೆಲ್ಲರೂ ಇದ್ದೇವೆ. "

" ಆಚಾರ್ಯರೆ, ನನ್ನ ಮಿತ್ರನ ಮಗನು ನನಗೆ ಹೊರಗಿನವನೆ ? ಆತನ ಊಟವು ನಮ್ಮಲ್ಲಿಯೆ ಆದರೆ ತಪ್ಪೇನು ?"

" ರಾಯರೆ, ಯದುಪತಿ ನಿಮಗೆ ಹೊರಗಿನವನಾಗಲಿಕ್ಕಿಲ್ಲ, ಮತ್ತು ನಿಮ್ಮ ಪತ್ನಿಗೂ ಹೊರಗಿನವನಾಗಲಿಕ್ಕಿಲ್ಲ. ಆದರೆ ನಿಮ್ಮಲ್ಲಿ ಬೇರೆ ಜನರುಂಟು. ಅವರಿಗೆ ನಿಃಸಂಶಯವಾಗಿ ಆತನು ಹೊರಗಿನವನು. ಇದಲ್ಲದೆ ಅನಾಥ ವಿದ್ಯಾರ್ಥಿಗಳಿಗೆ ಮಾಧುಕರಿ ಕಾಮಧೇನು. ಅದು ವಿದ್ಯಾರ್ಥಿಯನ್ನು ಯಾರ ಹಂಗಿಗೂ ಒಳಗಾಗಿಸದೆ ಅವನ ಹೊಟ್ಟೆಯ ಚಿಂತೆಯನ್ನು ಬಿಡಿಸುವುದಲ್ಲದೆ, ತನಗೆ ಅನ್ನವನ್ನು ನೀಡುವ ಸಮಾಜವನ್ನು ತಂದೆತಾಯಿಗಳ ಸ್ಥಾನದಲ್ಲಿ ಇಟ್ಟುಕೊಳ್ಳಲು ಅವನಿಗೆ ಕಲಿಸುವುದು. ಅನ್ನಕ್ಕಾಗಿ ವ್ಯಕ್ತಿಯ ಹಂಗು ಬೇಡ. ಅದು ವಿದ್ಯಾರ್ಥಿಯ ಧೀರವೃತ್ತಿಯನ್ನೆ ಹಾಳುಮಾಡುತ್ತದೆ. ಅನ್ನಕ್ಕಾಗಿ ಸಮಾಜವನ್ನು ಆಶ್ರಯಿಸುವ, ಎಂದರೆ ಮಾಧುಕರಿಯನ್ನು ಅವಲಂಬಿಸುವ, ಅನಾಥ ವಿದ್ಯಾರ್ಥಿ ಸಮಾಜವನ್ನು ಪಿತೃಸ್ಥಾನದಲ್ಲಿ ಇಟ್ಟುಕೊಂಡರೆ ಯಾರ ಹಂಗಿನಲ್ಲಿಯೂ ಉಳಿಯದೆ ತನ್ನ ಕಲ್ಯಾಣವನ್ನು ಮಾಡಿಕೊಳ್ಳಲು ಅವನಿಗೆ ಅನುಕೂಲವಾಗುವುದಲ್ಲದೆ, ಸಮಾಜವನ್ನು ಪಿತೃಸ್ಥಾನದಲ್ಲಿ ಇಟ್ಟುಕೊಂಡುದರಿಂದ ಮುಂದೆ ಸಮಾಜಸೇವೆ ಅವನಿಗೆ ಧರ್ಮವಾಗುವುದು. ಆದುದರಿಂದ ಯದುಪತಿಗೆ ಅನ್ನವು ಮಾಧುಕರಿಯ ಅನ್ನವು. ಉಳಿದ ಮಾತಿನಲ್ಲಿ ನಾವೆಲ್ಲರೂ ಹೊಣೆಗಾರರು. "

ಆಚಾರ್ಯರ ಮಾತಿನಲ್ಲಿ ನಿಷ್ಠುರತೆ ಇರುತ್ತಿದ್ದರೂ ವಿವೇಕವು ಇರುತ್ತಿದ್ದಿತು. ಅನುಭವದ ಪ್ರತಿಷ್ಠೆ ಅದಕ್ಕೆ ಇರುತ್ತಿದ್ದಿತು. ಆದುದರಿಂದ ಅವರು ಹೇಳಿದುದು ಪುರುಷೋತ್ತಮರಾಯರಿಗೂ ಬೀರಣ್ಣನಿಗೂ ಸಮಂಜಸವಾಗಿ ತೋರಿತು. ಅವರು ಆಚಾರ್ಯರ ಮಾತು ಪ್ರಮಾಣವೆಂದರು.

ಆ ಹೊತ್ತಿಗೆ ಯದುಪತಿ ಒಳಗಿನಿಂದ ಬಂದನು. ಕಂಡು ಆಚಾರ್ಯರು ಎಂದರು, " ಯದುಪತೀ, ನೀನೇ ಏನಯ್ಯಾ ಹಾಡಿದುದು ?"

" ಅಹುದು, ಸ್ವಾಮೀ. "

" ಇನ್ನೊಮ್ಮೆ ಹಾಡುವೆಯೇನಯ್ಯಾ ? ಚೆನ್ನಾಗಿದೆ ಹಾಡು. ಬೀರಣ್ಣಾ ತಂಬೂರಿಯನ್ನು ಇತ್ತ ತಾ. ನೀನು ಮೃದಂಗವನ್ನು ತೆಗೆದುಕೊಳ್ಳು ಯದುಪತೀ, ನಿಧಾನವಾಗಿ ಹಾಡುವೆಯಾ ?"

" ಹಾಡುವೆನು, ಸ್ವಾಮೀ "

ಆಚಾರ್ಯರು ತಂಬೂರಿಯನ್ನೂ ಬೀರಣ್ಣನು ಮೃದಂಗವನ್ನೂ ಸರಿಗೊಳಿಸಿದರು. ಆಚಾರ್ಯರ ಬೆರಳುಗಳು ತಂಬೂರಿಯ ತಂತಿಗಳಮೇಲೆ ಆಡತೊಡಗಿದುವು. ಯದುಪತಿ ನಾದದಲ್ಲಿ ಲೀನನಾದನು, ಮತ್ತು ಹಾಡಲಾರಂಭಿಸಿದನು. ಹಾಡು ಸರಾಗವಾಗಿ ಸಾಗಿತು. ಕೃತ್ರಿಮತೆಯ ಸಂಪರ್ಕವಾಗಲಿ ಅಹಂಪ್ರತ್ಯಯದ ಸಂಸರ್ಗವಾಗಲಿ ಇರಲಿಲ್ಲವಾದುದರಿಂದ ಸ್ವಾಭಾವಿಕತೆಯ ಮಾಧುರ್ಯವು ನಿರರ್ಗಲವಾಗಿ ಪ್ರವಹಿಸತೊಡಗಿತು. ನಿಷ್ಣಾತನಾದ ಗಾಯಕನ ಕಲೆಯ ಪರಿಪಕ್ವತೆ ಯದುಪತಿಯ ಹಾಡಿನಲ್ಲಿ ಇರಲಿಲ್ಲವೆಂಬುದು ನಿಜವು. ಆದರೆ ತೇಜಸ್ವಿಯಾದ ಬೀಜದ ಆಶ್ಚರ್ಯಕಾರಕ ಶಕ್ತಿ ಆಮೂಲಾಗ್ರವೂ ಸ್ಫುರಿಸುತ್ತಿದ್ದಿತು. ಆಚಾರ್ಯರು ಸಂತುಷ್ಟರಾದರು. ಅವರ ಮುಖದಲ್ಲಿ ಪ್ರಸನ್ನತೆ ಉಕ್ಕುತ್ತಿದ್ದಿತು. " ದೇವಾಧಿದೇವಾ, ಎಷ್ಟೊಂದು ನನ್ನಲ್ಲಿ ನಿನ್ನ ದಯೆ ! ಎಂತಹ ಶಿಷ್ಯನನ್ನು ನೀನು ನನಗೆ ದಯೆಪಾಲಿಸಿದೆ ! ಆತನಲ್ಲಿ ನಿಂತು ನನ್ನ ಸೇವೆಯನ್ನು ಸ್ವೀಕರಿಸು, ತಂದೇ !" ಎಂದು ಅವರು ಮನಸ್ಸಿನಲ್ಲಿ ಪರಮಾತ್ಮನನ್ನು ಪ್ರಾರ್ಥಿಸಿದರು. ಹಾಡು ಮುಗಿದ ಬಳಿಕ ಅವರು ಬಹು ಪ್ರೇಮದಿಂದ ಯದುಪತಿಗೆ ಎಂದರು, " ಮಗು, ಬಲು ಚೆನ್ನಾಗಿ ಹಾಡಿದೆ. ನಾಳೆಯಿಂದ ನಾನು ನಿನಗೆ ಸಂಗೀತವನ್ನು ಕಲಿಸುವೆನು. ಮನಸು ಗೊಟ್ಟು ಕಲಿ. "

ಯದುಪತಿ ಕೈಮುಗಿದು ತಲೆಬಾಗಿದನು.

ದಮಯಂತಿ ಬಂದು, " ಎಲೆ ಹಾಕಿದೆ. ಎಲ್ಲರೂ ಏಳಬೇಕಂತೆ, " ಎಂದು ಹೇಳಿ ಒಳಗೆ ಓಡಿದಳು. ಯದುಪತಿ ಮೊದಲಾಗಿ ಎಲ್ಲರೂ ಎದ್ದು ಒಳಗೆ ಹೋದರು.

* * * *

೭

ಹಿಂದಿನ ಪ್ರಕರಣದಲ್ಲಿ ಹೇಳಿದ ಮಾತಿಗೆ ಐದು ತಿಂಗಳುಗಳು ಆದುವು. ಈ ಅವಧಿಯಲ್ಲಿ ಯದುಪತಿಗೆ ರಾಮಪುರವು ತನ್ನ ಊರಾಯ್ತು. ಆತನು ಆಚಾರ್ಯರಲ್ಲಿ ಮಲಗುತ್ತಿದ್ದನು. ಆಚಾರ್ಯರಲ್ಲಿ ದಿನಾಲು ಪ್ರಾತಃ ಕಾಲದಲ್ಲಿ ಐದು ಗಂಟೆಗೆ ಪ್ರಾರ್ಥನೆಯಾಗುತ್ತಿತ್ತು. ಆಹೊತ್ತಿಗೆ ಮನೆಯವ ರೆಲ್ಲರೂ ಎದ್ದು ಪ್ರಾತರ್ವಿಧಿಯನ್ನು ತೀರಿಸಿಕೊಂಡು ಪ್ರಾರ್ಥನೆಗೋಸುಗ ನಡುಮನೆಯಲ್ಲಿ ನೆರೆಯುತ್ತಿದ್ದರು. ಕಳೆದ ಹದಿನೈದು ವರ್ಷಗಳಲ್ಲಿ ಆಚಾರ್ಯ ರಲ್ಲಿ ಈ ನಿಯಮಕ್ಕೆ ಒಮ್ಮೆಯೂ ಭಂಗವು ಬಂದಿರಲಿಲ್ಲ. ಪ್ರಾರ್ಥನೆಯಾದ ಬಳಿಕ ಯದುಪತಿ ಸಂಗೀತದ ಅಭ್ಯಾಸದಲ್ಲಿ ಒಂದು ಗಂಟೆಯನ್ನು ಕಳೆಯುತ್ತಿ ದ್ದನು. ತರುವಾಯ ಆತನು ಸ್ನಾನ ಸಂಧ್ಯಾವಂದನೆಗಳನ್ನು ಮುಗಿಸಿ ಒಂಬತರೆ ಗಂಟೆ ಶಾಲೆಯ ಅಭ್ಯಾಸವನ್ನು ಮಾಡಿಕೊಳ್ಳುತ್ತಿದ್ದನು ಬಳಿಕ ರಾಧಮ್ಮನವರು ಆತನಿಗೂ ಗೋದಾವರಿಗೂ ಉಪಾಹಾರವನ್ನು ಕೊಡುತ್ತಿದ್ದರು. ಆದಾದ ಬಳಿಕ ಆತನು ಮತ್ತೆ ಮುಕ್ಕಾಲು ಗಂಟೆ ಓದಿ, ಬೀರಣ್ಣನಲ್ಲಿಗೆ ಹೋಗಿ ಮಾಧುಕರಿಯ ವೇಳೆ ಆಗುವವರೆಗೆ ಅವನಿಗೆ ಪುಸ್ತಕ ಬಂಧನದ ಕೆಲಸದಲ್ಲಿ ನೆರವಾಗುತ್ತಿದ್ದನು. ಅನಂತರ ಮಾಧುಕರಿ ಮಾಡಿಕೊಂಡು ಬಂದು ಶಾಲೆಗೆ ಹೋಗುತ್ತಿದ್ದನು ಸಂಜೆಯಲ್ಲಿ ಶಾಲೆ ಬಿಟ್ಟ ಬಳಿಕ ಆತನು ಪುರುಷೋತ್ತಮ ರಾಯರಲ್ಲಿ ಹೋಗಿ, ಮಗುವನ್ನು ಕೆಲಹೊತ್ತು ಎತ್ತಿ ಆಡಿಸಿ, ಆಚಾರ್ಯರಲ್ಲಿಗೆ ಬಂದು ಗೋಪಾಲನೊಡನೆ ಆಡುತ್ತಾಗಲಿ ರಾಧಮ್ಮನವರಿಗೆ ಅವರ ಕೆಲಸದಲ್ಲಿ ನೆರವಾಗುತ್ತಾಗಲಿ ಅರ್ಧಮುಕ್ಕಾಲು ಗಂಟೆಯನ್ನು ಕಳೆಯುತ್ತಿದ್ದನು. ಬಳಿಕ ಆತನು ಸಂಧ್ಯಾವಂದನವನ್ನು ತೀರಿಸಿ ರಾತ್ರಿ ಊಟಮಾಡಿ ಸ್ವಲ್ಪಹೊತ್ತು ಓದಿ ಇಲ್ಲವೆ ಬರೆದು ಮಲಗಿಕೊಳ್ಳುತ್ತಿದ್ದನು. ನಿತ್ಯದ ಕಾರ್ಯಕ್ರಮದಲ್ಲಿ ಆಚಾರ್ಯರ ಸೂಚನೆಗಳಿಗನುಸಾರವಾಗಿ ಆಗಾಗ ಹೆಚ್ಚು ಕಡಿಮೆಗಳಾಗುತ್ತಿದ್ದುವು. ಆಚಾರ್ಯರು ದೃಢವ್ರತರು, ಮತ್ತು ನಿಯಮಪ್ರಿಯರು. ಅವರ ಈ ಗುಣ ಗಳು ಯದುಪತಿಯಲ್ಲಿಯೂ ಕ್ರಮೇಣ ನೆಲಸಿದುವು.

ಸಂಗೀತದಲ್ಲಿಯೂ ಶಾಲೆಯ ಅಭ್ಯಾಸದಲ್ಲಿಯೂ ಆತನ ಪ್ರಗತಿ ಸಂತೋಷಕರವಾಗಿತ್ತು. ಒಂದು ದಿನವಾದರೂ ಆಚಾರ್ಯರು ಪ್ರಸನ್ನರಾ

ಗದೆ ಇರಲಿಲ್ಲ. ಶಾಲೆಯಲ್ಲಿಯೂ ತನ್ನ ಶಿಕ್ಷಕರ ಮೆಚ್ಚುಗೆಯನ್ನು ಆತನು ಪಡೆದಿದ್ದನು; ಮತ್ತು ಕರ್ತವ್ಯತತ್ಪರತೆ, ಕುಶಾಗ್ರಬುದ್ಧಿ ಮತ್ತು ಉದಾರ ವೃತ್ತಿ ಇವುಗಳಿಂದ ವಿದ್ಯಾರ್ಥಿಮಿತ್ರರ ಪ್ರೇಮವನ್ನು ಸಂಪಾದಿಸಿದ್ದನು. ಆತನ ಪ್ರಗತಿಯನ್ನೂ ಶೀಲವನ್ನೂ ಕಂಡು ಪುರುಷೋತ್ತಮರಾಯರು ಬಹು ಆನಂದಪಡುತ್ತಿದ್ದರು. ತನ್ನ ರತ್ನದ ಪ್ರಭೆಯನ್ನು ಆಚಾರ್ಯರು ಮತ್ತು ಪುರುಷೋತ್ತಮರಾಯರು ಪ್ರಶಂಸಿಸುವುದನ್ನು ಕೇಳಿ ಸರಲಹೃದಯದ ಬೀರಣ್ಣನು ಹಿರಿಹಿರಿ ಹಿಗ್ಗುತ್ತಿದ್ದನು.

ಈ ಅವಧಿಯಲ್ಲಿ ಸಾವಕ್ಕನು ಅಜ್ಜನ ಊರಿಂದ ಮರಳಿ ಬಂದಿದ್ದಳು. ಭಟ್ಟರೂ ಎರಡು ಸಲ ಸೊನ್ನೆಗುಂದದಿಂದ ಬಂದು ಹೋಗಿದ್ದರು. ಎರಡನೆಯ ಸಲ ಭಟ್ಟರು ಬಂದು ತಿರುಗಿ ಹೋಗುವಾಗ ಬೀರಣ್ಣನಿಗೆ ಎಂದರು, "ಬೀರಾ, ಇವು ಇಪ್ಪತ್ತೈದು ರೂಪಾಯಿಗಳು ಇವೆ. ಯದುಪತಿಗೆ ಹೊಸ ಬಟ್ಟೆಗಳನ್ನು ಮಾಡಿಸು. ಮತ್ತೆ ಆತನಿಗೆ ಏನಾದರೂ ಬೇಕಾದರೆ ನನಗೆ ತಿಳಿಸು, ನಾನು ಹಣವನ್ನು ಕಳಿಸುವೆನು. ಈಸಲ ನನಗೆ ತೋಟದಿಂದ ಹೆಚ್ಚು ಹಣವು ಬಂದಿದೆ. ಭೂಮಿಯಿಂದ ಬಂದ ಹಣವನ್ನು ಭೂಮಿಯಲ್ಲಿ ಹೂಳಿಡುವುದಿದೆಯೆ ? ಅದರ ಸದ್ವಿನಿಯೋಗವಾಗಬೇಕು, ಬೀರಾ. ನರಹರಿಗೂ ಈಗ ನನ್ನಿಂದ ಹಣವು ಬೇಕಾಗುವುದಿಲ್ಲ. ವೇತನದಿಂದ ಅವನಿಗೆ ಸಾಕಷ್ಟು ಬರುವುದಂತೆ. ಸಾವಿತ್ರಿಗೂ ಮಕ್ಕಳಿಗೂ ಕೊರತೆಯೆಂಬುದಿಲ್ಲ, ನಿನ್ನ ಸಂಪಾದನೆ ಒಳಿತಾಗಿದೆ ನನ್ನ ಹೊಟ್ಟೆಬಟ್ಟೆಗೆ ಬೇಕಾಗುವುದೆಷ್ಟು ? ನನಗೆ ಸಾಕಾಗಿ ಉಳಿವುದು ದುಡ್ಡು. ಬೀರಾ, ನನ್ನ ತೋಟದ ಉತ್ಪನ್ನದ ಒಂದು ಅಂಶವು ಪುರುಷೋತ್ತಮರಾಯರ ಶಾಲೆಗೆ ಹೋಗುವುದು ಒಳಿತಲ್ಲವೆ? 'ನನ್ನ ತೋಟದ ಉತ್ಪನ್ನದ ಇಷ್ಟೊಂದು ಅಂಶವು ನಿಮ್ಮ ಶಾಲೆಗೆ,' ಎಂದು ನಿನ್ನೆ ರಾಯರಿಗೆ ಹೇಳಿ ಬಂದೆನು. ಬೀರಾ, ಯದುಪತಿಗೆ ಯಾವ ಕೊರತೆಯೂ ಆಗಕೂಡದು ಐದು ತಿಂಗಳುಗಳಲ್ಲಿ ಎಷ್ಟೊಂದು ಆತನ ಬುದ್ಧಿಯ ಬೆಳೆವಣಿಗೆಯೊ ! ಪರದೇಶಿ ಮಗು ! ತನ್ನ ವೃತ್ತಿಯಿಂದ ಆತನು ದೇವನನ್ನು ಮೆಚ್ಚಿಸಿರುವನು ನೋಡು. ಆದರೆ, ಬೀರಾ, ಆತನ ಅತ್ತೆ ಹಾಗೆ ಏನ್ನಬೇಕೇನೋ ? ದೇವನ ದಯೆಯಿಂದ ತನಗೆ ಸಂಪತ್ತು ಬಂದರೆ, ಅನಾಥರ ಹೃದಯದಲ್ಲಿ ಸೇವೆಯನ್ನು ಸ್ವೀಕರಿಸಲು ನಿಂತಿರುವ ದೇವನನ್ನು ಕಾಣದಷ್ಟು ಮನುಷ್ಯನು

ಕುರುಡನಾಗಬೇಕೇನೋ ? ಏನೋ ಏನೊ ! ಬೀರಾ, ನಾನೂ ಹೀಗೆಯೆ ಪರದೇಶಿ ಹುಡುಗನಿಗೆ ಚುಚ್ಚಿ ಮಾತನಾಡಿದೆನಲ್ಲವೆ ? ದೇವನನ್ನು ನೋಯಿಸಿದೆನಲ್ಲವೆ ? ಆದರೆ ದೇವನು ನನ್ನನ್ನು ಎಚ್ಚರಿಸಿದನು. ಆಬಳಿಕ ನಾನು ಯಾರಿಗೂ ಬಿರುನುಡಿಗಳನ್ನು ನುಡಿದಿಲ್ಲ. ಹಿರಿಯರ ಪುಣ್ಯವು, ತಾಯಿ ಗಂಗಮ್ಮನ ಪುಣ್ಯವು, ಗೌರಿಯ ಪುಣ್ಯವು ಈಗ ಫಲಿಸುತ್ತಿದೆ, ಬೀರಾ, ! ಒಳ್ಳೆಯ ಕಾಲ್ಗುಣದಾತನು ನಿನ್ನ ಯದುಪತಿ. ಎಷ್ಟು ದೊಡ್ಡಮನಸ್ಸಿನವನೊ ಆತನು ! 'ತಾತಯ್ಯನು ನನಗೆ ಬಿರುಸುಮಾತುಗಳನ್ನಾಡಿದರು,' ಎಂದು ನಿನಗೆ ಆತನು ಈವರೆಗೂ ಹೇಳಿಲ್ಲ ನೋಡು ! ಬೀರಾ, ನಿನ್ನ ರತ್ನವನ್ನು ಜಪ್ಪಿಸು !"

"ತಾತಯ್ಯಾ, ಯದುಪತಿ ಎಷ್ಟು ಮುಂದಿಯ ರತ್ನವು ! ನಾನು, ಆಚಾರ್ಯರು ಮತ್ತು ರಾಯರು ಎಲ್ಲರೂ ಜಪ್ಪಿಸುವೆವು. ಆತನಿಗೆ ಇಲ್ಲಿ ಯಾವುದಕ್ಕೂ ಕೊರತೆಯಿಲ್ಲ. ತಾತಯ್ಯಾ, ಈ ಹಣವು ಏಕೆ ?"

"ಇಟ್ಟುಕೊಳ್ಳಯ್ಯಾ, ಹುಡುಗನದು ಎಂದು ಇರಲಿ. ನಾಲೂ ವೇಳೆ ಸಮನಾಗಿ ಇರುವುದಿಲ್ಲ," ಎನ್ನುತ್ತ ಭಟ್ಟರು ಹೊರಟು ಬಿಟ್ಟರು. ಬೀರಣ್ಣನು ದೇವನ ಕರುಣೆಯನ್ನು ಕೊಂಡಾಡಿದನು.

ಒಂದು ದಿನ ಯದುಪತಿ ಮುಂಜಾವಿನಲ್ಲಿ ತನ್ನ ಅಭ್ಯಾಸವನ್ನು ಮಾಡಿಕೊಂಡು ಬೀರಣ್ಣನ ಮನೆಗೆ ಹೊರಡುವ ಮೊದಲು ಆಚಾರ್ಯರ ಬಳಿಗೆ ಬಂದು, "ಗುರುಗಳೆ, ನಾನು ಸಾವಕ್ಕನ ಮನೆಗೂ ಮಾಧುಕರಿಗೆ ಹೋಗ್ಬಹುದಲ್ಲವೆ ? ಆಕೆ ನನಗೆ ತಾಯಿಯಾಗಿದ್ದಾಳೆ," ಎಂದನು.

"ಹೋಗು, ಮಗು; ಅನುಮಾನವೇಕೆ ? ತಾಯಿ ನೀಡಿದ ತುತ್ತು ಅಮೃತದ ತುತ್ತು, ಯದುಪತೀ !"

"ಅವರು ಕುರುಬರು, ನಾವು ಬ್ರಾಹ್ಮಣರು. ಗುರುಗಳೇ, ಜಾತಿ ಹೋಗುವುದಿಲ್ಲವಷ್ಟೇ ?"

"ಶುದ್ಧ ಹೃದಯದವರು ಶುದ್ಧಪಾತ್ರದಲ್ಲಿ ಶುದ್ಧಾನ್ನವನ್ನು ನೀಡುವಾಗ ಜಾತಿಯ ವಿಚಾರವೇ ? ನಿಜವಾಗಿ ಇದ್ದುದು ಜಾತಿಯಲ್ಲ, ನಿಜವಾಗಿ ಇದ್ದುದು ವೃತ್ತಿ. ಇಲ್ಲದುದನ್ನು ಕಾಯ್ದುಕೊಳ್ಳಬೇಕೆಂಬುದು ಹುಚ್ಚು ಹಂಬಲು ! ಮನುಷ್ಯನು ಕಾಯ್ದುಕೊಳ್ಳಬೇಕಾದುದು ಜಾತಿ ಅಲ್ಲ, ವೃತ್ತಿ.

ಒಂದೇ ಒಂದು ಮಾತಿನಿಂದ ವೃತ್ತಿ ಅಳಿವುದು ದುಃಶೀಲದಿಂದ. ತಾಯಿಯಾಗಿದ್ದ ಸ್ತ್ರೀಯಿಂದ ಶುದ್ಧಾನ್ನದ ಭಿಕ್ಷೆಯನ್ನು ಸ್ವೀಕರಿಸುವುದು ದುಃಶೀಲವಲ್ಲ. ಅಂತಹ ಸ್ತ್ರೀಯ ಬಳಿಗೆ ಭಿಕ್ಷೆಗೆ ಹೋಗದಿರಲು ಮನಸ್ಸು ಮಾಡುವುದು ದುಃಶೀಲವು. ನನ್ನ ಅಭಿಪ್ರಾಯವನ್ನು ನೀನು ಕೇಳಿ ತಿಳಿದುಕೊಂಡೆ, ಯದುಪತೀ; ನಿನಗೆ ಯೋಗ್ಯವೆನಿಸುವುದನ್ನು ನೀನು ಮಾಡು," ಎಂದು ನುಡಿದು ಆಚಾರ್ಯರು ಸ್ನಾನಕ್ಕೆ ಹೊರಟರು, ಮತ್ತು ಬಚ್ಚಲ ಕೋಣೆಯತ್ತ ಹೋಗುತ್ತ ಎಂದರು, "ಜಾತಿ ಜಾತಿ ಎನ್ನುತ್ತ ನೀತಿಯನ್ನೇ ಮರೆತಿತು ಸಮಾಜವು! ಬಚ್ಚಲುಗಜ್ಜಿನಂತೆ ನಾರುತ್ತಿದೆ ಸಮಾಜದ ವಿಚಾರಪ್ರಣಾಲಿ! ಹಳೆಯ ಬಚ್ಚಲ ಕುಣಿಯಲ್ಲಿಯ ಕೊಳಚಿನೀರಿನಂತೆ ವಿಕೃತವಾಗಿದೆ ನಮ್ಮ ವಿಚಾರವೆಲ್ಲವು! ದೇವಾ, ಗಂಗೆಯ ಪ್ರವಾಹದಂತೆ ಇದು ಪಾವನವಾಗಿ ಎಂದು ಹರಿವುದೋ?"

"ಓಂ ಭವತಿ ಭಿಕ್ಷಾಂ ದೇಹಿ।" ಈ ಅಷ್ಟಾಕ್ಷರಿ ಮಹಾಮಂತ್ರವನ್ನು ಕಂಡ ಋಷಿಯೇ, ನಿಮ್ಮ ಅಡಿಗಳಿಗೆ ತಲೆಬಾಗುವೆನು. ಜ್ಞಾನೋಪಾಸನೆಯ ದೀಕ್ಷೆಯನ್ನು ಗ್ರಹಿಸಿ ವಿದ್ಯಾರ್ಜನೆಯಲ್ಲಿ ನಿರತರಾದ ಬ್ರಹ್ಮಚಾರಿಗಳ ಪೋಷಣವು ಸಮಾಜದ ಹೊಣೆಯೆಂದು ಸಾರುವ ಮಂತ್ರವಿದು; ವಿದ್ಯಾರ್ಥಿಗಳಿಗೆ—ಶ್ರೀಮಂತರಿರಲಿ, ನಿರ್ಧನರಿರಲಿ—ವಿಲಾಸಕ್ಕೆ ಮನನೀಯದೆ ಸರ್ವೋದಯವನ್ನು ಸಾಧಿಸಲು ಅವಶ್ಯವಾಗಿದ್ದ ಆತ್ಮವಿಕಾಸವನ್ನು ಪಡೆಯಲು ಅಹರ್ನಿಶವೂ ಯತ್ನಿಸುವುದು ಅವರ ಕರ್ತವ್ಯವೆಂದು ಹೇಳುವ ಮಂತ್ರವಿದು; ಸಮಾಜದ ಧುರೀಣರಾಗಲು ಸುಪ್ತಶಕ್ತಿಗಳನ್ನು ಎಚ್ಚರಿಸುತ್ತಿರುವ ಬ್ರಹ್ಮಚಾರಿಗಳ ಜೋಳಿಗೆಯಲ್ಲಿ ಭಿಕ್ಷೆಯನ್ನಿರಿಸಿ ಭಾಗ್ಯವತಿಯಾಗಲು ಗೃಹಿಣಿಯನ್ನು ಉತ್ಸುಕೆಯಾಗಿಸುವ ಮಂತ್ರವಿದು. ಈ ಮಂತ್ರದ ಪ್ರಭಾವದಿಂದ ಸಾಂಸಾರಿಕ ವ್ಯಕ್ತಿಗಳಿಗೆ ವಿದ್ಯಾರ್ಥಿಗಳ ಭಾರವಿಲ್ಲದಾಗಿ, ಮತ್ತು ವಿದ್ಯಾರ್ಥಿಗಳಿಗೆ ಸಾಂಸಾರಿಕ ವ್ಯಕ್ತಿಗಳ ಹಂಗಿಲ್ಲದಾಗಿ, ಸಮಾಜದ ಅತ್ಯಂತ ಮಹತ್ತ್ವದ ಕಾರ್ಯವು ನೇರವೇರುವುದು. ವಿಶ್ವೋಪಕಾರಿಗಳಾದ ಆತ್ಮಜ್ಞಾನಿಗಳ ಪರಂಪರೆಯನ್ನು ನಿರ್ಮಿಸಲು ಸಮರ್ಥವಾದ ಈ ದಿವ್ಯಮಂತ್ರದ ದ್ರಷ್ಟಾರನಾದ ಮಹರ್ಷಿಯೇ, ಮತ್ತೊಮ್ಮೆ ನಿಮ್ಮಡಿಗೆ ಬಾಗುವೆನು.

ಬೀರಣ್ಣನು ಊಟಕ್ಕೋಸುಗ ಒಳಗೆ ಬಂದು ಕುಳಿತಿದ್ದನು. ಸಾವಕ್ಕನು ತಟ್ಟೆಯನ್ನಿಟ್ಟು ಬಡಿಸಲು ಪ್ರಾರಂಭಿಸಿದ್ದಳು. “ॐ भवति भिक्षां देहि !” ಎಂಬ ಗಂಭೀರ ಧ್ವನಿ ಅವರ ಕಿವಿಗೆ ಬಂದಿತು. “ಇದೇನು ? ಯದುಪತಿಯ ಧ್ವನಿಯಂತೆ ಕೇಳಿಸುತ್ತದಲ್ಲ !” ಎನ್ನುತ್ತ ಸಾವಕ್ಕನು ನಡುಮನೆಯಲ್ಲಿ ಹಣಿಕಿ ನೋಡಿದಳು. ಕೈಯಲ್ಲಿ ಜೋಳಿಗೆಯನ್ನು ಹಿಡಿದುಕೊಂಡು ಯದುಪತಿ ನಿಂತಿದ್ದಾನೆ ! ಸಾವಕ್ಕನು ಧಾವಿಸಿ ಬಂದು, “ ಇದೇನು, ಮಗು ? ನನ್ನಲ್ಲಿ ನಿನಗೆ ಭಿಕ್ಷೆಯೆ ? ತಾಯಿಯಲ್ಲಿ ಮಗನಿಗೆ ಭಿಕ್ಷೆಯೆ ? ಏನು ವಿಪರೀತವಿದು ? ಈ ಮನೆಯ ಅನ್ನದಲ್ಲಿ ನಿನಗೆ ಪಾಲು ಇಲ್ಲವೆ ! ಮಗನೆ, ಇಂದಿನಿಂದ ನೀನು ಮಾಧುಕರಿಯನ್ನು ಮಾಡಲಾಗದು ! ಜೋಳಿಗೆಯನ್ನು ಕೆಳಗಿಡು ! ನಿನ್ನ ಊಟವು ಇಂದಿನಿಂದ ಇಲ್ಲಿಯೆ. ಮಗನೆ, ತಾಯಿಯ ಮಾತನ್ನು ನಡೆಯಿಸು. ಹಾಗೆಯೆ ನಿಂತೆಯಲ್ಲ, ಯದುಪತೀ ? ನನ್ನ ಮಾತು ನಡೆಯದೇ ? ನೀವಾದರೂ ಹೇಳಬಾರದೇ ? ಈತನು ನನ್ನ ಮಾತಿಗೆ ಕಿವಿಗೊಡನು ! ಮಗನೆ, ಮಗನೆ, ತಾ ಇತ್ತ ಜೋಳಿಗೆಯನ್ನು ! ಅಯ್ಯೋ, ಈತನ ಮನಸ್ಸು ಕಲ್ಲು !” ಸಾವಕ್ಕನಿಗೆ ಕಂಠವು ತುಂಬಿ ಬಂದಿತು, ಕಣ್ಣುಗಳಿಂದ ಅಶ್ರುಧಾರೆ ಹರಿಯತೊಡಗಿತು. ಬೀರಣ್ಣನು ಹೊರಗೆ ಬಂದು, “ ಯದುಪತೀ, ನಿನ್ನ ತಾಯಿಯ ಮನವು ಕಲಕಿದೆ ನೋಡು. ಅವಳ ಮಾತನ್ನು ನಡೆಯಿಸು, ಮಗನೇ !” ಎಂದನು. ಅವನ ಕಣ್ಣುಗಳಲ್ಲಿಯೂ ನೀರು ತುಂಬಿತ್ತು.

ಯದುಪತಿಯ ಮನಃಶಾಂತಿ ಅಳಿದಿರಲಿಲ್ಲ. ಗಂಭೀರನಾಗಿ ಆತನು ನುಡಿದನು, “ ಅಕ್ಕಾ, ಗುರುವಿನ ಆಜ್ಞೆ, ! ‘ ವಿದ್ಯಾರ್ಥಿ ಯಾಗಿರುವವರೆಗೆ ನಿನಗೆ ಅನ್ನವು ಮಾಧುಕರಿಯ ಅನ್ನವು, ’ ಎಂದು ಅವರು ನನಗೆ ವಿಧಿಸಿದುದನ್ನು ನೀನು ಅರಿಯದೆ ಇಲ್ಲ. ಅವರ ಆಜ್ಞೆಗೆ ನನ್ನಿಂದ ಭಂಗವು ಬರಲಾಗದು ! ಭಿಕ್ಷೆಯಾದರೆ ತಪ್ಪೇನು ? ವಿದ್ಯೆಯನ್ನು ಸಂಪಾದಿಸಲು ವಿದ್ಯಾರ್ಥಿಯಾದವನು ಅನ್ನಕ್ಕೋಸುಗ ಅನ್ನಾರ್ಥಿಯಾದರೆ ಹಾನಿಯೇನು ? ಹಾನಿಯಿದೆ ವಂಚನೆಯಲ್ಲಿ—ಆತ್ಮವಂಚನೆಯಲ್ಲಿ ಮತ್ತು ಪರವಂಚನೆಯಲ್ಲಿ. ನನ್ನಲ್ಲಿ ವಂಚನೆ ಇಲ್ಲವಷ್ಟೆ. ‘ ಕಮಲಮ್ಮನ ಮಗನು, ಸಾವಕ್ಕನ ಮಗನು, ನಿರ್ಮಲ ಜೀವಿ, ’ ಎಂದೆನಿಸಿಕೊಂಡರೆ ಆ ತಾಯಿಗೂ ಸಂತೋಷವು, ಈ ತಾಯಿಗೂ ಸಂತೋಷವು, ಅಲ್ಲವೆ ? ಅಕ್ಕಾ, ಮಾಧುಕರಿಯನ್ನು ನೀಡು. ”

ಸಾವಕ್ಕನು ಮರುನುಡಿಯದೆ ಒಳಗೆ ಹೋಗಿ ಮಾಧುಕರಿಯನ್ನು ತಂದು, “ ತಾಯಿ ನೀಡಿದ ತುತ್ತು ಮಗನ ಹೊಟ್ಟೆಯಲ್ಲಿ ಅಮೃತವಾಗಲಿ, ” ಎನ್ನುತ್ತ ಅದನ್ನು ಯದುಪತಿಯ ಜೋಳಿಗೆಯಲ್ಲಿ ಇರಿಸಿ, “ ಮಗನೆ, ನಿರ್ಮಲನಾಗಿ ಬಾಳು, ” ಎಂದು ಹರಸಿ, ವಾತ್ಸಲ್ಯವು ಉಕ್ಕೇರಿ ಬರಲು, ಆತನನ್ನು ಬಿಗಿಯಾಗಿ ಅಪ್ಪಿಕೊಂಡಳು. ತಾಯಿಯ ಮೊಲೆ ತೊರೆದು ಹಾಲು ಚಿಮ್ಮಿ ಆತನ ನೆತ್ತಿ ತೊಯ್ದಿತು ! ಲೇಖನಿಯೆ, ನಿನ್ನ ಶಕ್ತಿಯನ್ನು ನಾನು ಅರಿಯದಿಲ್ಲ, ಇಲ್ಲಿ ನೀನು ಕುಂಠಿತವಾದುದು ಆಶ್ಚರ್ಯವಲ್ಲ !

ಕೆಲವು ನಿಮಿಷಗಳ ತರುವಾಯ ಸಾವಕ್ಕನು ಎಂದಳು, “ ಮಗನೆ, ನಿನ್ನ ಮಾಧುಕರಿಯ ಅನ್ನವು ಪವಿತ್ರವಾದುದು. ಈ ಮನೆಯ ಅನ್ನದಲ್ಲಿಯೂ ಇಂದು ಅದು ಬೆರೆಯಲಿ. ಇವರು ಉಣ್ಣುವರು, ಮುಕುಂದನು ಉಣ್ಣುವನು, ನಾನು ಉಣ್ಣುವೆನು, ಮತ್ತು ನನ್ನ ಮೊಲೆಯುಂಡ ಬಳಿಕ ಗೌರಿಯೂ ಉಂಡಂತಾಗುವುದು.

“ ತಾಯಿಯ ಮಾತನ್ನು ನಡೆಯಿಸಲು, ಗುರುವೆ, ಈ ಸಂಧಿಯನ್ನು ನೀವೇ ಒದಗಿಸಿದಿರಿ, ” ಎನ್ನುತ್ತ ಯದುಪತಿ ಮಾಧುಕರಿಯ ಸ್ವಲ್ಪ ಭಾಗವನ್ನು ಸಾವಕ್ಕನು ಮುಂದೆ ಹಿಡಿದ ತಟ್ಟೆಯಲ್ಲಿ ಭಕ್ತಿಯಿಂದ ಇಟ್ಟು ತಾಯಿಯ ಪಾದಗಳ ಮೇಲೆ ಹಣೆಯಿಟ್ಟು ಎದ್ದು, ಹಸನ್ಮುಖನಾಗಿ ಅವಳನ್ನು ಆದರದಿಂದ ನೋಡಿ ಅವಳ ಅನುಜ್ಞೆಯಿಂದ ಆಚಾರ್ಯರಲ್ಲಿಗೆ ಬಂದನು. ನಿತ್ಯವೂ ಆತನ ಮಾಧುಕರಿ ಅವರಲ್ಲಿಯೆ ಕೊನೆಗೊಳ್ಳುತ್ತಿದ್ದಿತು.

ಅಂದು ಯದುಪತಿಗೆ ಆನಂದವು, ಮಹಾನಂದವು. ತನಗೆ ತಾಯಿಯಾಗಿದ್ದ ಸಾವಕ್ಕನ ಕೈದುತ್ತನ್ನು ಉಣ್ಣಲು ತನಗೆ ಗುರುವಿನ ಆಜ್ಞೆ ದೊರೆತಿತೆಂದು, ಮತ್ತು ಆ ಗುರುವಿನ ಕೃಪೆಯಿಂದ ಜಾತಿಯ ಒಂದು ಬಂಧನದಿಂದ ತಾನು ಮುಕ್ತನಾದೆನೆಂದು. ಸಾವಕ್ಕನ ಅಕೃತ್ರಿಮವಾದ, ಪ್ರಾಣಪೋಷಕವಾದ ಪ್ರೇಮವು ಸಾತ್ತ್ವಿಕವಿಚಾರಗಳ ತರಂಗಗಳನ್ನು ಆತನಲ್ಲಿ ಹುಟ್ಟಿಸಿತು. ಆತರಂಗಮಾಲೆಗಳಲ್ಲಿ ಆತನ ಮನೋಹಂಸವು ಆನಂದದಿಂದ ಅಂದಿನ ದಿನವೆಲ್ಲವೂ ವಿಹರಿಸುತ್ತಿದ್ದಿತು.

ಇತ್ತ ಬೀರಣ್ಣನಿಗೆ ಒಂದು ಬಗೆಯ ಮನಃಕ್ಲೇಶವು, ಮತ್ತು ಒಂದು ಬಗೆಯ ಸಮಾಧಾನವು. ಇದೊಂದು ವಿಚಿತ್ರವಾದ ಪರಿಸ್ಥಿತಿ “ ನನಗೆ

ಸಾಮರ್ಥ್ಯವಿದೆ, ಆದರೂ ಯದುಪತಿ ಅನ್ನಕ್ಕೋಸ್ಕರ ಮಾಧುಕರಿಯನ್ನು ಅವಲಂಬಿಸಬೇಕಾಯ್ತಲ್ಲ! ಇದರಿಂದ ನನಗೆ ಕ್ಲೇಶವಲ್ಲವೆ? ಆದರೆ ಗುರುವಿನ ಆಜ್ಞೆಯಂತೆ ಆಚರಿಸುವುದರಲ್ಲಿಯೆ ತನಗೆ ಹಿತವೆಂಬ ಮಾತಿನಲ್ಲಿ ಆತನಿಗೆ ಅಚಲ ವಿಶ್ವಾಸವು. ಹುಡುಗನ ಈ ವಿಶ್ವಾಸವು, ಈ ಗುರುಭಕ್ತಿ ಆತನಿಗೆ ಕಲ್ಯಾಣವನ್ನು ಮಾಡದಿರದೆಂಬ ವಿಚಾರದಿಂದ ನನಗೆ ಸಮಾಧಾನವಿದೆ. ಆದರೆ ಈ ಸಮಾಧಾನವಿದೆ ಎಂದು ಕ್ಲೇಶವು ಹೋಗಲೊಲ್ಲದು! ಬಿಸಿಲು ತಗ್ಗಿದ ಬಳಿಕ ಗುರುಗಳಲ್ಲಿಗೆ ಹೋಗಿ ಕೆಲಹೊತ್ತು ಅವರೊಡನೆ ಇದ್ದು ಬಂದರೆ ಮನಸ್ಸಿಗೆ ಶಾಂತಿ ದೊರೆಯಬಹುದು. ಸಾವಿತ್ರಿಯ ಮನಸ್ಸೂ ಅಸ್ವಸ್ಥವಾಗಿದೆಂಬುದು ಮೇಲೆಯೆ ಕಾಣುತ್ತದೆ. ದಿನದ ಅವಳ ಉಲ್ಲಾಸವು ಇಂದು ಇಲ್ಲ. ಅವಳೂ ನನ್ನೊಡನೆ ಬಂದರೆ ಉತ್ತಮವಲ್ಲವೇ?" ಎಂದು ಯೋಚಿಸಿ ಅವನು ಸಾವಕ್ಕನ ಬಳಿಗೆ ಬಂದು, "ಸಾವಿತ್ರೀ, ಬಿಸಿಲು ತಗ್ಗಿದ ಮೇಲೆ ಗುರುಗಳಲ್ಲಿಗೆ ಹೋಗಬೇಕೆಂದಿರುವೆನು. ನೀನು ಬರುವೆಯೇನು?" ಎಂದನು.

"ನೀವು ಹೋದರೆ ನಿಮ್ಮೊಡನೆ ಬರುವೆನು ಏಕೋ ನನ್ನ ಮನಸ್ಸಿಗೆ ಇಂದು ಸಮಾಧಾನವಿಲ್ಲ. ಹುಡುಗನನ್ನಾದರೂ ಅಲ್ಲಿ ಕಂಡೇನು. ಮಗನಿಗೆ ಮನೆಯಲ್ಲಿ ಕುಳ್ಳಿರಿಸಿ ಅನ್ನನೀಡುವ ಭಾಗ್ಯವಿಲ್ಲದ ತಾಯಿ ನಾನು! ಅನ್ನವನ್ನು ನೀವು ತರಲಾರಿರಾ? ಅನ್ನವನ್ನು ನಾನು ಮಾಡಲಾರೆನೆ? ಆದರೆ ಹುಡುಗನ ಪಾಲಿಗೆ ಮಾಧುಕರಿ! ಗುರುವಿನ ಆಜ್ಞೆಯನ್ನು ಆತನು ಪಾಲಿಸಬೇಕು. ನಾನು ಅಡ್ಡಬರಲಾರೆನು, ನನ್ನ ಕಂದಮ್ಮನು ನಿರ್ಮಲನಾಗಿ ಬಾಳಲಿ, ದೊಡ್ಡವನಾಗಲಿ! ಬೇಗನೆ ನಾನು ಕೆಲಸವನ್ನು ಮುಗಿಸುವೆನು. ಗುರುಗಳಲ್ಲಿಗೆ ಹೋಗೋಣವಂತೆ. ನನ್ನ ಮನಸ್ಸಿಗೆ ಸಮಾಧಾನವಾಗಬಹು," ಎಂದು ಸಾವಕ್ಕನು ತನ್ನ ಕೆಲಸದಲ್ಲಿ ತೊಡಗಿದಳು. ಬೀರಣ್ಣನೂ ಪುಸ್ತಕಗಳನ್ನು ಹೊಲಿಯಲು ಕುಳಿತನು. ಇಬ್ಬರ ಕಣ್ಣುಗಳ ಮುಂದೂ ಯದುಪತಿಯ ಶಾಂತ ಮೂರ್ತಿ ನಲಿದಾಡುತ್ತಿತ್ತು.

ಬಿಸಿಲು ತಗ್ಗುವ ಹೊತ್ತಿಗೆ ಸಾವಕ್ಕನ ಕೆಲಸವು ಮುಗಿಯಿತು. ಅವಳು ನಿದ್ರೆಯಿಂದ ಎದ್ದ ಮಗುವಿಗೆ ಮೊಲೆಯುಣಿಸಿ, ಮಗುವಿಗೂ ಮುಕುಂದನಿಗೂ ಒಗೆದ ಅಂಗಿಗಳನ್ನು ತೊಡಿಸಿ, ತಾನೂ ಸಿದ್ಧತೆಯನ್ನು ಮಾಡಿಕೊಂಡಳು. ಬೀರಣ್ಣನೂ ಕೆಲಸವನ್ನು ತೀರಿಸಿ, ಪುಸ್ತಕಗಳನ್ನು ಸರಿಯಾಗಿಟ್ಟು, ಕೈಕಾಲು

ಮುಖಗಳನ್ನು ತೊಳೆದುಕೊಂಡು ಹೊರಡಲು ಸಿದ್ಧತೆಯನ್ನು ಮಾಡಿಕೊಂಡನು. ಗಂಡಹೆಂಡಿರಿಬ್ಬರ ಕೆಲಸಗಳೂ ಬಲು ಹಸನು. ಯಾವಯಾವ ವಸ್ತುಗಳು ಎಲ್ಲೆಲ್ಲಿ ಇರಬೇಕೊ ಅಲ್ಲಲ್ಲೇ ಇದ್ದರೆ ಅವರಿಗೆ ಸಮಾಧಾನವು. ಸಾವಕ್ಕನ ಕೆಲಸದೆಡೆಗಳಲ್ಲಾಗಲಿ ಬೀರಣ್ಣನ ಕೆಲಸದೆಡೆಗಳಲ್ಲಾಗಲಿ ಕಸವು, ದೂಳು ದೃಷ್ಟಿಗೆ ಬಾರದು. ವಸ್ತುಗಳು ತಾವಿರುವ ಎಡೆಗಳಲ್ಲಿ ಹೇಗಿರಬೇಕೊ ಹಾಗಿದ್ದರೆ ಸೌಂದರ್ಯವು ಉಂಟಾಗುವುದು. ವಸ್ತುಗಳು, ಅವು ಸುಂದರವಾಗಿದ್ದರೂ, ಎಡೆದಪ್ಪಿ ಅವ್ಯವಸ್ಥಿತವಾಗಿ ಬಿದ್ದುಕೊಂಡಿದ್ದರೆ, ಕಸವಾಗಿ ತೋರುವುವು. ಈ ಮಾತನ್ನು ಸಾವಕ್ಕನು ಬೀರಣ್ಣನಿಂದ ಕಲಿತಿದ್ದಳೊ ಬೀರಣ್ಣನು ಸಾವಕ್ಕನಿಂದ ಕಲಿತಿದ್ದನೊ ಯಾರು ಹೇಳಬಲ್ಲರು ? ಒಂದು ಮಾತು ನಿಜವು, ಅವರ ಕೆಲಸದ ಎಡೆಗಳಲ್ಲಿ ಸೌಂದರ್ಯವು ನಲಿಯುತ್ತಿತ್ತು. ಇಂದು ಅವರು ಆಚಾರ್ಯರಲ್ಲಿಗೆ ಹೊರಟಾಗ ಅವರ ಮನೆ ದೇವದಂಪತಿಗಳ ವಿರಾಮಸ್ಥಾನವಾಗಿತ್ತು.

ಗಂಡಹೆಂಡಿರು ಮಕ್ಕಳೊಡನೆ ಮನೆಯಿಂದ ಹೊರಟರು. ಮೊದಲಿನ ಮನಃಕ್ಷೋಭವು ಈಗ ಅವರಿಗೆ ಇರಲಿಲ್ಲ. ಮುಖಗಳಲ್ಲಿ ಪ್ರಸನ್ನತೆ ಮೂಡುತ್ತಿದ್ದಿತು. ಸಾತ್ತ್ವಿಕ ಭಾವನೆಗಳಿಂದ ಉದ್ಭವಿಸಿದ ವಿಚಾರಲಹರಿಗಳು ಕೆಲವೊಂದು ಕಾರಣದಿಂದ ಮನಸ್ಸಿನಲ್ಲಿ ಸ್ವಲ್ಪ ಕ್ಷೋಭವನ್ನು ಒದಗಿಸಿದರೂ ಕೊನೆಯಲ್ಲಿ ಮನಸ್ಸನ್ನು ಶಾಂತಿಯಲ್ಲಿ ಇರಿಸುವುವು. ಪ್ರಾರಂಭದಲ್ಲಿ ಮನಸ್ಸನ್ನು ತರಲವಾಗಿಸಿ ಬಳಿಕ ಅದಕ್ಕೆ ಸ್ಥಿರತೆಯನ್ನು ಒದಗಿಸುವುದು ಶುದ್ಧಪ್ರೇಮದ ಸ್ವಭಾವವೋ ಏನೊ ! ಪ್ರೇಮದಿಂದ ಮನಸ್ಸು ತರಲವಾಗುತ್ತಿರುವ ಮಾತಿನ ಅನುಭವದಿಂದ " अतिस्नेहः पापशङ्की " ಎಂದು ಕವಿಕುಲಗುರು ಹೇಳಿದನು. ಆದರೆ ಶುಚಿಯಾದ ಆ ಸ್ನೇಹವೇ ಕೊನೆಯಲ್ಲಿ ಶಾಂತಿಯನ್ನು ಹುಟ್ಟಿಸುವುದೆಂಬ ಅನುಭವದಿಂದ ಸಂದರ್ಭೋಚಿತವಾಗಿ " शुचिस्नेहस्तु शान्तिदः " ಎಂದು ಹೇಳಿ ಪಾದವನ್ನು ಮುಗಿಸಲು ಇನ್ನೊಬ್ಬ ಕವಿ ಹುಟ್ಟಬೇಕಾಗಿದೆ.

ಬೀರಣ್ಣನು ಮತ್ತು ಸಾವಕ್ಕನು ಆಚಾರ್ಯರ ಮನೆಯನ್ನು ಸಮೀಪಿಸಿದರು. ಗೋದಾವರಿ ಕಂಡು, " ಅವ್ವಾ, ಸಾವಕ್ಕ ಬಂದಳು, " ಎಂದು ಕೂಗಿ ಹೊರಗೆ ಬಂದು ಸಾವಕ್ಕನ ತೋಳಿನಲ್ಲಿದ್ದ ಗೌರಿಯನ್ನು ಎತ್ತಿಕೊಂಡು ಒಳಗೆ ಬಂದಳು. ರಾಧಮ್ಮನವರು ಹೊರಗೆ ಬಂದು, " ಬೀರಣ್ಣನೂ ಬಂದಿದ್ದಾನೆ, " ಎನ್ನುತ್ತ ಸಾವಕ್ಕನೊಡನೆ ಒಳಗೆ ಹೋದರು. ಆಚಾರ್ಯರು,

" ಬಾರಯ್ಯಾ ಬೀರಣ್ಣಾ, " ಎಂದು ಅವನನ್ನು ಒಳಗೆ ಕರೆದು ಕುಳ್ಳಿರಿಸಿ ಕೊಂಡರು.

*　　*　　*　　*

೮

ಬೀರಣ್ಣನ ಮುಖದ ಮೇಲೆ ಪ್ರಸನ್ನತೆ ಕಾಣಿಸುತ್ತಿದ್ದರೂ ಮನೋವ್ಯಥೆಯ ಛಾಯೆ ಸಂಪೂರ್ಣವಾಗಿ ಅಳಿದಿರಲಿಲ್ಲ. ಆಚಾರ್ಯರ ಸೂಕ್ಷ್ಮ ದೃಷ್ಟಿಗೆ ಇದು ಗೊತ್ತಾಗದೆ ಇರಲಿಲ್ಲ. ಅವರು ಎಂದರು, "ಬೀರಣ್ಣಾ, ಎಲ್ಲವೂ ಸರಿಯಾಗಿದ್ದಂತೆ ತೋರುವುದಿಲ್ಲವಲ್ಲ ? ಮನಸ್ಸಿಗೆ ವ್ಯಾಕುಲತೆ ಏನು ?"

" ಏನೋ ಒಂದು ವ್ಯಾಕುಲತೆ. ಹುಡುಗನು ತನ್ನ ಅನ್ನಕ್ಕೋಸುಗ ಮಾಧುಕರಿ ಮಾಡಬೇಕಾಯ್ತಲ್ಲಾ ಎಂದು, " ಹೀಗೆ ನುಡಿದು ಬೀರಣ್ಣನು ಯದುಪತಿ ತನ್ನಲ್ಲಿಗೆ ಮಾಧುಕರಿಗೆ ಬಂದುದನ್ನೂ ಆ ಬಳಿಕ ನಡೆದುದನ್ನೂ ಸವಿಸ್ತರವಾಗಿ ಹೇಳಿದನು.

ಆಚಾರ್ಯರು ಗಂಭೀರವಾಗಿ ನುಡಿದರು, " ಬೀರಣ್ಣಾ, ಸಾವಿತ್ರಿ ನಿಜವಾಗಿಯೂ ಧನ್ಯೆ ! ಎರಡನೆಯವರ ಮಗುವಿನ ವಿಷಯದಲ್ಲಿ ಇಷ್ಟೊಂದು ಪುತ್ರವಾತ್ಸಲ್ಯವುಳ್ಳವಳಾಗಿರುವುದು ಸಾಮಾನ್ಯ ಸ್ತ್ರೀಗೆ ಶಕ್ಯವಲ್ಲ. ನಾನು ಮಾತೃಪ್ರೇಮವನ್ನು ಸವಿದವನಲ್ಲ. ನನಗೆ ತಿಳಿವಳಿಕೆ ಹುಟ್ಟುವ ಮೊದಲೆ ನನ್ನ ತಾಯಿ ತೀರಿದಳು. ನನ್ನ ತಂದೆ ಬೇರೆ ಮದುವೆಯಾದರು. ಮಲತಾಯಿ ಕರ್ಕಶೆಯಾಗಿದ್ದಳು. ಹೀಗಾಗಿ ನನಗೆ ತಾಯಿಯ ಸುಖವೆಂಬುದು ಇರಲಿಲ್ಲ. ಮುಂದಿನ ಜನ್ಮದಲ್ಲಿ ಸಾವಿತ್ರಿ ನನಗೆ ತಾಯಿಯಾಗಲಿ ! ಅವಳಂತಹ ಪ್ರೇಮ ಮೂರ್ತಿಯ ಮನವು ಇಂದು ನೊಂದುದು ಸೋಜಿಗವಲ್ಲ. ಆದರೆ ಯದುಪತಿಗೆ ಅನ್ನವು ಮಾಧುಕರಿಯ ಅನ್ನವು ಎಂದು ನಾನು ನಿರ್ಧರಿಸಿದುದು ಆತನ ಹಿತದ ದೃಷ್ಟಿಯಿಂದ. "

" ಆದರೆ, ಗುರುಗಳೆ, ಆತನ ಹೊಟ್ಟೆಬಟ್ಟೆಯನ್ನು ನೋಡಿಕೊಳ್ಳುವುದು ನನಗೆ ತಮ್ಮ ಆಶೀರ್ವಾದದಿಂದ ಶಕ್ಯವಿರುತ್ತದಲ್ಲವೆ ?"

"ಬೀರಣ್ಣಾ, ನನಗೂ ಶಕ್ಯವಿರುತ್ತದಲ್ಲವೆ? ಪುರುಷೋತ್ತಮರಾಯರಿಗೂ ಶಕ್ಯವಿರುತ್ತದಲ್ಲವೆ ? ನಮಗೆ ಯದುಪತಿಯಲ್ಲಿ ಪ್ರೇಮವು ಕಡಿಮೆಯೆ ? ಆದರೂ ಹಾಗೆ ನಾನು ನಿರ್ಧರಿಸಿದೆನು. ನನ್ನ ನಿರ್ಧಾರದಿಂದ ಯದುಪತಿಗೆ ಯಾವ ಬಗೆಯಿಂದಾದರೂ ಕೊರತೆಯಿಲ್ಲವಷ್ಟೇ. ನಮ್ಮೆಲ್ಲರ ವಿಷಯದಲ್ಲಿ ಆತನ ಪ್ರೇಮವು, ಆತನ ಆದರವು ಅನುಪಮವಾಗಿರುವುದು. ಆತನ ಪ್ರಗತಿಗೆ, ಆತನ ವಿಕಾಸಕ್ಕೆ ಯಾವ ಬಗೆಯ ವ್ಯತ್ಯಯುವೂ ಒದಗದಂತೆ ನಾವು ನೋಡಿ ಕೊಳ್ಳುತ್ತಿರುವೆವು. ಬೀರಣ್ಣಾ, ನಾನು ಒಂಬತ್ತನೆಯ ವರ್ಷ ತಂದೆಯನ್ನೂ ಕಳೆದುಕೊಂಡು ಅನಾಥನಾದೆನು. ಹೇಗೋ ಬೆಳೆದೆನು. ಅನಾಥ ವಿದ್ಯಾರ್ಥಿ ತನ್ನ ಅನ್ನಕ್ಕೋಸುಗ ಮಾಧುಕರಿಯನ್ನೇ ಅವಲಂಬಿಸಬೇಕೆಂಬ ಮಾತನ್ನು ಸ್ವಾನುಭವದಿಂದ–ಬಹು ಕಟುವಾದ ಅನುಭವದಿಂದ–ತಿಳಿದೆನು."

"ಗುರುಗಳೆ, ಯದುಪತಿಗೆ–– ಆತನು ವಿದ್ಯಾರ್ಥಿಯಾಗಿರುವವರೆಗೆ- ಮಾಧುಕರಿಯ ಅನ್ನವೇ ಅನ್ನವಾದರೆ ಯಾವ ಪ್ರಸಂಗದಲ್ಲಿಯೂ ಆತನು ನಮ್ಮಲ್ಲಿ ಉಣ್ಣಲಾಗದೆ ?"

"ಬೀರಣ್ಣಾ, ನಾನು ಹೇಳಿದುದರ ಅರ್ಥವು ಇದಲ್ಲ. ನಿನಗೆ ನನ್ನ ದೊಂದು ಪ್ರಶ್ನೆ. ತಂದೆ ತಾಯಿ ಇದ್ದ ಮಕ್ಕಳು ಅನ್ನಕ್ಕೋಸುಗ ಯಾರನ್ನು ಅವಲಂಬಿಸಬೇಕು ?"

"ತಮ್ಮ ತಂದೆತಾಯಿಗಳನ್ನು."

"ಆಪ್ತೇಷ್ಟರಾಗಲಿ ಮಿತ್ರರಾಗಲಿ ಪ್ರೇಮದಿಂದ ಅವರನ್ನು ಊಟಕ್ಕೆ ಕರೆಯಲಾಗದೊ ?"

"ಗುರುಗಳೆ, ತಮ್ಮ ಮಾತಿನ ಅರ್ಥವಾಯ್ತು. ಸಾವಿತ್ರಿಗೆ ಸಮಾಧಾನಕ್ಕೆ ಮಾರ್ಗವಾಯ್ತು."

"ಇನ್ನೊಂದು, ಮಾತು ಬೀರಣ್ಣಾ; ಯದುಪತಿಗೆ ಸಾವಿತ್ರಿಯಂತಹ ಸಾಧ್ವಿ ತಾಯಿಯಾಗಿರುವಾಗ, ನಾವಿಷ್ಟು ಜನರು ದೇವನ ಪ್ರೇರಣೆಯಿಂದ ಆತ ನಿಗೆ ಹಿತಚಿಂತಕರಾಗಿರುವಾಗ, ಮತ್ತು ಆತನೆ ತನ್ನ ಸದ್ಗುಣಗಳಿಂದ ಮತ್ತು ಬುದ್ಧಿಪ್ರಕರ್ಷದಿಂದ ಯಾರೊಡನೆ ಸಂಪರ್ಕವು ಬರುವುದೊ ಅವರ ಅಂತಃ ಕ್ಕರಣವನ್ನು ಕ್ಷಣಾರ್ಧದಲ್ಲಿ ಜಯಿಸಲು ಸಮರ್ಥನಾಗಿರುವಾಗ ನಾವು ಆತನ ಲ್ಲಿ ಭಾವನಾವಶರಾಗಿ ಮಿಡುಗುತ್ತಿರುವುದು ಯಾವ ನ್ಯಾಯವು ?

ಆತನು ನಮ್ಮ ಅಂತಃಕರಣದಲ್ಲಿ ಅಚಲನಾಗಿ ನಿಂತಿರುವನಾದರೂ ನಾವು ಅಲಿಪ್ತರಾಗಿ ಆತನ ವಿಷಯದಲ್ಲಿ ನಮ್ಮ ಕರ್ತವ್ಯವನ್ನು ಮಾಡುತ್ತಿರುವುದು ವಿಹಿತವು. ಹೀಗೆ ನಡೆದುಕೊಂಡರೇನೆ ನಾವು ಆತನಿಗೆ ಹೆಚ್ಚಿನ ಹಿತವನ್ನು ಮಾಡಬಲ್ಲೆವು. ಮನುಷ್ಯನಿಗೆ ಭಾವನೆಯೆಂಬುದು ಬೇಕು, ಆದರೆ ಭಾವನಾ-ವಶತೆ ಹಿತಕಾರಿಯಲ್ಲ. ”

ರಾಧಮ್ಮನವರು ಗೌರಿಯನ್ನು ಎತ್ತಿಕೊಂಡು ಒಳಗೆ ಬಂದರು ಮತ್ತು, “ ನೋಡಿದಿರಾ ? ಸಾವಿತ್ರಿಯ ಕೂಸು ಇದು, ಗೌರಿ; ಎಷ್ಟು ಮುದ್ದಾಗಿದ್ದಾಳೆ. ಸಾವಿತ್ರಿ ಅಜ್ಜನ ಊರಿಂದ ತಿರುಗಿ ಬಂದ ಬಳಿಕ ಒಮ್ಮೆ ಇಲ್ಲಿ ಬಂದಿದ್ದಳು. ನೀವು ಮನೆಯಲ್ಲಿ ಇರಲಿಲ್ಲ,” ಎಂದೆನ್ನುತ್ತ ಮಗುವನ್ನು ಆಚಾರ್ಯರ ತೊಡೆಯ ಮೇಲೆ ಮಲಗಿಸಿದರು. ಆಚಾರ್ಯರು ಆನಂದಪಟ್ಟು ಅರಳಿದ ಕಣ್ಣುಗಳಿಂದ ಮಗುವನ್ನು ನೋಡುತ್ತ, “ ನೀನೂ ನಿನ್ನ ತಾಯಿಯಂತೆ ಗುಣವಂತಿಯಾಗು, ಮಗು, ” ಎಂದು ಹರಸಿ ಚಿಟಿಕೆಹಾಕುತ್ತ ಕುಳಿತರು.

ರಾಧಮ್ಮನವರು ಎಂದರು, “ ಬೀರಣ್ಣಾ, ಇಂದಿನ ದಿವಸ ನೀವು ಇಲ್ಲಿಯೆ ಇರಬೇಕು. ಹೊಸ ಮಗು ಮನೆಗೆ ಬಂದಿದ್ದಾಳೆ. ಇಂದು ಶುಕ್ರವಾರ ರಾತ್ರಿ ಲಕ್ಷ್ಮೀಪೂಜೆ. ಬೀರಣ್ಣಾ, ಯದುಪತಿ ಎಷ್ಟು ಚೆನ್ನಾಗಿ ಹಾಡುವನೊ ! ನೀನು ಇನ್ನೂ ಕೇಳಿಲ್ಲ. ಆಚಾರ್ಯರು ಒಮ್ಮೊಮ್ಮೆ ಕೇಳುತ್ತ ಮೈಮರೆತು ಕೂಡುವರು. ಮೊನ್ನೆ ಆತನು ಹಾಡುತ್ತಿರುವಾಗ ಗೋದಾವರಿ ತಲ್ಲೀನೆಯಾಗಿ ತಾಳಹಾಕುತ್ತ ಅಲ್ಲಿಯೆ ಕುಳಿತುಬಿಟ್ಟಳು. ನಾನು ಬಂದು ನೋಡಿದೆನು. ಮೂವರೂ ಸಂಗೀತದಲ್ಲಿ ತದಾತ್ಮರಾಗಿದ್ದರು. ‘ಸಂಗೀತಾಚಾರ್ಯರ ಮನೆಯ ಸೌಭಾಗ್ಯವು ಇಷ್ಟು ಪಾವನವೊ?’ ಎನ್ನುತ್ತ ನಾನೂ ಆನಂದವಶೆಯಾದೆನು ! ಬೀರಣ್ಣಾ, ಇಂದು ಯದುಪತಿಯ ಸಂಗೀತವನ್ನು ಕೇಳುವೆಯಂತೆ. ”

“ ಅಹುದು, ಬೀರಣ್ಣಾ, ಹುಡುಗನ ಸಂಗೀತದಲ್ಲಿ ವಿಲಕ್ಷಣವಾದ ಶಕ್ತಿಯಿದೆ. ಇಂದು ಇಲ್ಲಿಯೆ ಇರು. ನೀನು ಕೇಳುವೆಯಂತೆ. ನನ್ನ ಪರಿಶ್ರಮವು ತನ್ನ ಮಗನಲ್ಲಿ ಫಲಿಸುತ್ತಿರುವುದನ್ನು ಸಾವಿತ್ರಿ ನೋಡಿ ಆನಂದಪಡಲಿ. ”

“ ಅಮ್ಮಾ, ಗುರುಗಳೇ, ನಿಮ್ಮ ಆಜ್ಞೆ. ”

ಯದುಪತಿ ಶಾಲೆಯಿಂದ ಬಂದನು. ಆತನ ಮುಖದಲ್ಲಿ ಹರ್ಷವು ನರ್ತಿಸುತ್ತಿತ್ತು. ಆಚಾರ್ಯರ ತೊಡೆಯ ಮೇಲೆ ಗೌರಿ ಇದ್ದುದನ್ನು ಕಂಡು,

" ಬೀರಣ್ಣಾ, ಅಕ್ಕನೂ ಬಂದಿರುವಳೇನು ? ಅಮ್ಮಾ, ಅಕ್ಕನು ಎಲ್ಲಿದ್ದಾಳೆ ?" ಎಂದು ಉತ್ತರವು ಬರುವುದರೊಳಗೆ ಒಳಗೆ ಓಡಿದನು. ಸಾವಕ್ಕನನ್ನು ಕಂಡು, ಮತ್ತೆ ಹೊರಗೆ ಬಂದು ಆತನು ಆಚಾರ್ಯರಿಗೆ ಎಂದನು, " ಗುರುಗಳೆ, ಪುರುಷೋತ್ತಮರಾಯರು ಅರ್ಧಗಂಟೆಯಲ್ಲಿ ಇಲ್ಲಿಗೆ ಬರುವರಂತೆ. ಹೇಳೆಂದು ನನಗೆ ಹೇಳಿದರು. "

ಗೌರಿ ಅಳತೊಡಗಿದಳು. ಯದುಪತಿ ಅವಳನ್ನು ಎತ್ತಿಕೊಂಡು ಸಾವಕ್ಕನ ಬಳಿಗೆ ಹೋದನು.

"ಇಂದು ಹಬ್ಬವು, ಬೀರಣ್ಣಾ. ಪುರುಷೋತ್ತಮರಾಯರೂ ಬರುವರು. ಅವರೂ ನೋಡುವರು ಸಂಗೀತದಲ್ಲಿ ಯದುಪತಿಯ ಪ್ರಗತಿಯನ್ನು," ಆಚಾರ್ಯರು ಎಂದರು

" ಪುರುಷೋತ್ತಮರಾಯರು ಬರುವರು. ಲಕ್ಷ್ಮೀಬಾಯಿಯೂ ಬಂದರೆ ಒಳಿತಲ್ಲವೆ ? ಇಂದು ನಮ್ಮಲ್ಲಿ ಹೊಸಮಕ್ಕಳ ಹಬ್ಬವಾಗಲಿ," ರಾಧಮ್ಮನವರು ಎಂದರು.

" ಚಹಾ ಆನಂದ ಬೇಗನೆ ಯದುಪತಿಯನ್ನು ಪುರುಷೋತ್ತಮರಾಯರಲ್ಲಿಗೆ ಕಳಿಸು. ಆತನು ಹೇಳಿ ಬರಲಿ. ಗಂಡಹೆಂಡಿರು ಕೂಡಿಯೆ ಬರಲಿ." ಆಚಾರ್ಯರು ಎಂದರು.

ರಾಧಮ್ಮನವರು ಒಳಗೆ ಬಂದು ಯದುಪತಿಯನ್ನು ಪುರುಷೋತ್ತಮರಾಯರಲ್ಲಿಗೆ ಕಳಿಸಿದರು.

ಎರಡನೆಯವರಲ್ಲಿ ಪರಜಾತಿಯವರಿಗೆ ಪ್ರವೇಶವಿರದಿದ್ದರೆ ಆಚಾರ್ಯರಲ್ಲಿ ಪರಜಾತಿ ಭಾವನೆಗೆ ಪ್ರವೇಶವಿರಲಿಲ್ಲ. ಆದುದರಿಂದ ಅವರ ಮನೆಯಲ್ಲಿ ಬೀರಣ್ಣನೂ ಸಾವಕ್ಕನೂ ಪರಜಾತಿಯವರಾಗಿರಲಿಲ್ಲ. ಆ ಗಂಡಹೆಂಡಿರು ತಮ್ಮ ಶೀಲದಿಂದ ಆಚಾರ್ಯರ ಮನೆಯವರ ಅಂತಃಕರಣವನ್ನು ಸೆಳೆದಿದ್ದರು. ಆದುದರಿಂದ ಅವರು ಇವರಿಗೆ ಹೊರಗಿನವರಾಗಿರಲಿಲ್ಲ. ಅವರು ಇವರ ಮನೆಗೆ ಬಂದರೆ ಅವರಿಗೂ ಸಂಕೋಚವಿಲ್ಲ, ಇವರಿಗೂ ಸಂಕೋಚವಿಲ್ಲ. ಮನೆಯ ಹಿರಿಯ ಮಗಳಿಗೆ ಹೇಗೋ ಹಾಗೆ ಸಾವಕ್ಕನಿಗೆ ಅಲ್ಲಿ ಪೂರ್ಣ ಸ್ವಾತಂತ್ರ್ಯವಿದ್ದಿತು. ರಾಧಮ್ಮನವರು ಅಡಿಗೆಗೆ ಕುಳಿತರು, ಸಾವಕ್ಕನು ಮತ್ತು ಲಕ್ಷ್ಮೀಬಾಯಿ ಉಳಿದ ಕೆಲಸಗಳನ್ನು ಮಾಡುತ್ತ ಆಗಾಗ ರಾಧಮ್ಮನವರಿಗೆ ನೆರವಾಗುತ್ತಿದ್ದರು. ಅಡಿಗೆ ಆಯ್ತು.

ಎಲ್ಲರೂ ನಡುಮನೆಯಲ್ಲಿ ಲಕ್ಷ್ಮೀಪೂಜೆಗೋಸುಗ ನೆರೆದರು. ಪೂಜೆ ಸಂಗೀತದಿಂದ ಕೊನೆಗೊಳ್ಳುವುದು ಆಚಾರ್ಯರಲ್ಲಿ ಪದ್ಧತಿ. ಬೀರಣ್ಣನು ಆಚಾರ್ಯರಿಗೆ ತಂಬೂರಿಯನ್ನು ತಂದು ಕೊಟ್ಟು ತಾನು ಮೃದಂಗವನ್ನು ಇಟ್ಟುಕೊಂಡು ಕುಳಿತನು. ಆಚಾರ್ಯರು ಯದುಪತಿಯತ್ತ ನೋಡಿ, "ಮೊನ್ನೆ ನೀನು ಹೇಳಿದ ಆ ಹಾಡನ್ನು ಹೇಳಯ್ಯ. ಗೊತ್ತಾಯ್ತೆ ಯಾವುದೆಂಬುದು ? 'ಜನಸೇವೆ ಜೀವನದ ಸಾರ್ಥಕ್ಯವು,' ಎಂಬ ಹಾಡು," ಎಂದು ತಂತಿಗಳನ್ನು ಮೀಟತೊಡಗಿದರು. ಅಂದಿನ ದಿನವು ಯದುಪತಿಗೆ ಆನಂದದ ದಿನವು. ಗುರುಭಕ್ತಿ ಮಾತೃವಾತ್ಸಲ್ಯಗಳ ಭಾವನೆಗಳಿಂದ ಆತನ ಹೃದಯವು ಪವಿತ್ರವಾಗಿದ್ದಿತು. ರಾತ್ರಿಯ ಪ್ರಶಾಂತ ಸಮಯವು. ಲಕ್ಷ್ಮೀಪೂಜೆಯಿಂದ ಎಲ್ಲರ ಮನಸ್ಸೂ ಪ್ರಸನ್ನವಾಗಿದ್ದಿತು. ಯದುಪತಿ ತಂಬೂರಿಯ ಸ್ಫೂರ್ತಿಪ್ರದವಾದ ನಾದದಲ್ಲಿ ತಲ್ಲೀನನಾಗಿ ಹಾಡಲಾರಂಭಿಸಿದನು:—

ರಾಗ:—ತೋಡಿ

ಜನಸೇವೆ ಜೀವನದ ಸಾರ್ಥಕ್ಯವು
ಮನುಜನೆಂಬನು ತನಗೆ ಬಂಧುವಾಗಿರಲು ॥ ಪಲ್ಲವಿ ॥

ಪ್ರೇಮನಿಲಯನ ಚರಣಪೂಜೆಗರ್ಪಿಸಲು ಹೃತ್-
ಪ್ರೇಮಸುಮವಲ್ಲದಿನ್ನಾವುದಿಹುದು !
ಪ್ರೇಮಕುತ್ಸುಕನಾಗಿ ಜನಹೃದಯದಲಿ ಜಗತ್-
ಸ್ವಾಮಿ ನಿಂತಿಹನಂತರಾರಾಮನು ! ॥ ೧ ॥

ಆವುದೇ ಜೀವವಿರಲದು ವಿಶ್ವಭಾವನನಿ-
ಗಾವಾಸವಾಗಿರಲು ಭೇದವೇಕೋ ? ॥
ಪಾವನಾತ್ಮನ ಪಾದಪೂಜೆಯೆಲ್ಲಾ ಜನದ
ಸೇವೆಯಿಂದಲ್ಲದಿನ್ನೇತರಿಂದೋ ? ॥ ೨ ॥

ಸಮದರ್ಶಿ ವಿಶ್ವಪತಿ; ಮನವೆ, ನೀನೇಕಲೇ
ಭ್ರಮದಲ್ಲಿ ಸಿಲುಕಿ ಭೇದವನು ಬಗೆದು ॥
ಶ್ರಮಗೊಳುವೆ ಜನಹೃದಯವನು ಕದಡಿ, ದುರ್ಭಾವಿ,
ವಿಮಲನಾಗೈ, ಜನದ ಬಂಧುವಾಗು ॥ ೩ ॥

ಅವಾಙ್ಮನೋಗೋಚರನಾದ ಅಚಿಂತ್ಯಶಕ್ತಿ ಪರಮಾತ್ಮನೆ, ಪಾವಿತ್ರ್ಯವು ನಿನ್ನ ರೂಪು, ಪ್ರೇಮವು ನಿನ್ನ ರೂಪು, ಮಾಧುರ್ಯವು ನಿನ್ನ ರೂಪು ಎಂಬುದನ್ನು ಭಕ್ತಿಪುನೀತರಾದವರ ಸಂಗೀತದಲ್ಲಿ ಶ್ರವಣಗೋಚರನಾಗಿ ತೋರಿಸುವ ಕಾರುಣ್ಯಸಿಂಧೋ, ನಿನ್ನ ಮಹಿಮೆಯನ್ನು ಕೊಂಡಾಡಲು ನನ್ನ ಮನಸ್ಸನ್ನು ಪಾವಿತ್ರ್ಯಕ್ಕೆ ನೆಲೆಯಾಗಿಸು, ತಂದೇ; ನನ್ನ ಹೃದಯವನ್ನು ಪ್ರೇಮಕ್ಕೆ ನಿಲಯವಾಗಿಸು, ನಾಥಾ; ನನ್ನ ಕಂಠವನ್ನು ಮಾಧುರ್ಯಕ್ಕೆ ಮನೆಯಾಗಿಸು, ಪ್ರಭೂ !

ಯದುಪತಿಯ ಸಂಗೀತದಿಂದ ಎಲ್ಲರೂ ಆನಂದಿತರಾದರು, ಪ್ರಸನ್ನರಾದರು. ಅವರೆಲ್ಲರ ಆನಂದವು ಅವರ ಪ್ರಸನ್ನವಾದ ಮುಖದಲ್ಲಿ ಒಡಮೂಡಿತ್ತು. ಗುರುವಿನ ಪ್ರಸನ್ನತೆಯಿಂದ ಯದುಪತಿಯ ಆನಂದವು ಇಮ್ಮಡಿಸಿತು. ಎಲ್ಲರೂ ಮೌನದಲ್ಲಿ ಕೆಲಹೊತ್ತು ಉಳಿದರು. ಬಳಿಕ ಆಚಾರ್ಯರು ಎಂದರು, “ ಯದುಪತಿಯ ಸಂಗೀತವು ನಿರ್ಮಿಸಿದ ಈ ವಾತಾವರಣವು ನಮ್ಮೊಡನೆ ಚಿರಕಾಲವಿರಲಿ. ಭೇದಭಾವವು ಭೀತಿಪ್ರದವು, ಭ್ರಾತೃಭಾವವು ಭಾಗ್ಯದಾಯಿ, ಎಂಬ ಮಾತು ನಮ್ಮ ಮಾರ್ಗದರ್ಶಿಯಾಗಲಿ. ‘ ಭ್राजते यत्र सौभ्रात्रं रमन्ते तत्र देवताः ।’ ಎಂಬ ಅಮೃತವಾಕ್ಯವು ನಿರಂತರವೂ ನಮ್ಮ ಹೃದಯದಲ್ಲಿ ನೆಲಸಿ ನಮ್ಮನ್ನು ಸೇವಾಕಾರ್ಯದಲ್ಲಿ ನಿರತವಾಗಿಸಲಿ. ದೇವದೇವಾ, ನಮ್ಮ ಪ್ರಾರ್ಥನೆಯನ್ನು ಫಲಕಾರಿಯಾಗಿಸು. ” ಎಲ್ಲರೂ ತಲೆಬಾಗಿ ದೇವನಡಿಗೆ ಭಕ್ತಿಕುಸುಮವನ್ನು ಅರ್ಪಿಸಿದರು.

ಉದಾರಹೃದಯದವರು ಕೂಡಿದಲ್ಲಿ ವಾತಾವರಣವು ಎಷ್ಟೊಂದು ಪವಿತ್ರವಾಗಿರುತ್ತದೆ ಮತ್ತು ಎಷ್ಟೊಂದು ಮಧುರವಾಗಿರುತ್ತದೆ ಎಂಬುದು ಅಂದು ಸಂಗೀತಾಚಾರ್ಯರಲ್ಲಿ ನೆರೆದ ಮಿತ್ರಸಮ್ಮೇಲನದಲ್ಲಿ ಪ್ರತ್ಯಕ್ಷವಾಗುವಂತಿತ್ತು. ನುಡಿಯಲ್ಲಿ ರುಚಿ, ನಡೆಯಲ್ಲಿ ರುಚಿ; ನುಡಿಯಲ್ಲಿ ಶುಚಿ, ನಡೆಯಲ್ಲಿ ಶುಚಿ; ನುಡಿನಡೆಗಳಿಗೆ ಮಾತೃಸ್ಥಾನವಾದ ಮನಸ್ಸು ರುಚಿಯಾಗಿರಲು ಮತ್ತು ಶುಚಿಯಾಗಿರಲು ಎಲ್ಲವೂ ರುಚಿ ಮತ್ತು ಎಲ್ಲವೂ ಶುಚಿ. ಮಹತ್ತ್ವದ ಮಾತೆಂದರೆ ಮನಸ್ಸು ಪ್ರಸನ್ನವಾಗಿರಬೇಕು. ಉದಾರಹೃದಯದ ಸಹವಾಗಮವು ಮನಸ್ಸನ್ನು ಪ್ರಸನ್ನವಾಗಿಸುತ್ತದೆ.

"मनोपुब्बङ्गमा धम्मा मनोसेट्ठा मनोमया।
मनसा चे पसन्नेन भासति वा करोति वा।
ततो'नं सुखमन्वेति छाया'व अनपायिनी॥"

ಭಗವಾನ್ ಬುದ್ಧದೇವನ ಈ ವಚನವು ತ್ರಿಕಾಲಾಬಾಧಿತವಾದುದು.

ಎಲ್ಲರ ಊಟವಾಯ್ತು. ಆಚಾರ್ಯರು ಮಿತ್ರರೊಡನೆ ಮಾತನಾಡುತ್ತ ಕುಳಿತರು. ಹೆಣ್ಣುಮಕ್ಕಳೂ ತಮ್ಮ ತಮ್ಮ ಕೆಲಸಗಳನ್ನು ಬಹುಶಃ ಮುಗಿಸಿದ್ದರು. ಸಾವಕ್ಕನು ಆದೇ ಎಚ್ಚತ್ತ ಗೌರಿಗೆ ಹೊಟ್ಟೆಗೆ ಕೊಡುತ್ತ ಬೆಳುದಿಂಗಳಲ್ಲಿ ತುಲಸಿಯ ಕಟ್ಟೆಯ ಮೇಲೆ ಕುಳಿತಿದ್ದಳು. ಯದುಪತಿ ಬಂದನು. ಸಾವಕ್ಕನು ಎಂದಳು, "ಬಾ, ಮಗನೆ, ಕುಳಿತುಕೊಳ್ಳು. ಎಷ್ಟು ಚೆಂದವಾಗಿ ಹಾಡಿದೆ, ಯದುಪತೀ! ಗುರುಗಳು ಕೇಳುತ್ತ ಮೈಮ್ಮರೆತರು. ಮಗು, ಕಮಲಮ್ಮನವರು ಬಲು ಸವಿಯಾಗಿ ಹಾಡುತ್ತಿದ್ದರಂತಲ್ಲ?"

"ಅಹುದು, ಅಕ್ಕಾ, ಅವ್ವನು ಬಲು ಸವಿಯಾಗಿ ಹಾಡುತ್ತಿದ್ದಳು. ಇಂದು ನಾನು ಹಾಡಿದ ಹಾಡನ್ನು ಅವ್ವನು ಹಾಡುತ್ತಿರುವಾಗ ಅದನ್ನು ಕೇಳುತ್ತಿರುವ ಅಪ್ಪನ ಕಣ್ಣುಗಳಿಂದ ನೀರು ಹರಿಯುತ್ತಿದ್ದಿತು. 'ನಿನ್ನ ಹಾಡಿನಿಂದ ನೀನು ನನ್ನ ಒರಟುತನವನ್ನು ಕಳೆದೆ,' ಎಂದು ಅವನು ಆಗಾಗ ಎನ್ನುತ್ತಿದ್ದನು."

"ನೀನು ಹಾಡುತ್ತಿರುವಾಗ ಇಂದು ನನಗೆ ಹಾಗೆಯೆ ಆಯ್ತು, ಮಗು. ನನ್ನ ಕಣ್ಣುಗಳಿಂದಲೂ ನೀರು ಹರಿಯಿತು. ಗುರುಗಳತ್ತ ನಿನ್ನ ದೃಷ್ಟಿ ಹೋಗಿದ್ದಿತೊ? ಅವರು ಮೈಮ್ಮರೆತಿದ್ದರು. ಅವರ ಮುಖದ ಮೇಲೆ ಒಂದು ಬಗೆಯ ಬೆಳಕು ಹೊಳೆಯುತ್ತಿತ್ತು. ಅದು ಅವರಿಗಾದ ಆನಂದದ ಬೆಳಕು ಅಲ್ಲವೇ? ಯದುಪತೀ, ಎಲ್ಲರ ದೃಷ್ಟಿಗಳು ನಿನ್ನಲ್ಲಿ ನಟ್ಟಿದ್ದುವು. ಎಲ್ಲರಿಗೂ ಆನಂದವು, ಆಶ್ಚರ್ಯವು. ಮಗನೆ, ಶಾಲೆಯಲ್ಲಿಯೂ ನೀನು ನಿನ್ನ ವರ್ಗದಲ್ಲಿ ಎಲ್ಲರಿಗಿಂತ ಮೇಲಿರುವೆಯಂತೆ, ಹುಡುಗರ ಮತ್ತು ಗುರುಗಳ ಪ್ರೇಮವನ್ನು ಸಂಪಾದಿಸಿರುವೆಯಂತೆ. ಲಕ್ಷ್ಮೀಬಾಯಿ ಹೇಳಿದರು. ನೀನು ದೊಡ್ಡವನಾಗುವೆ. ಎಲ್ಲರೂ ನನ್ನನ್ನು ದೊಡ್ಡವನ ತಾಯಿಯೆಂದು ಹೇಳುವರು!"

ಸಣ್ಣ ಗಾಳಿ ಸುಳಿಯಿತು. ನೆರೆಯಲ್ಲಿಯೆ ಇದ್ದ ಪಾರಿಜಾತ ಗಿಡದಿಂದ ಹೂಗಳು ತಾಯಿ ಮಕ್ಕಳ ಮೇಲೆ ಉದುರಿದುವು.

ಕೆಲಹೊತ್ತು ಇಬ್ಬರೂ ಮೌನದಿಂದ ಇದ್ದರು. ಬಳಿಕ ಯದುಪತಿ ಮೆಲ್ಲನಿಯಿಂದ ಎಂದನು, "ಅಕ್ಕಾ, ನನ್ನನ್ನು ಕ್ಷಮಿಸುವೆಯಾ ?"

"ಇದೇನು, ಅಮ್ಮಯ್ಯಾ ? ನಿನ್ನಿಂದ ಯಾವ ತಪ್ಪಾಗಿದೆ ?"

"ಅಕ್ಕಾ, ನನ್ನ ಮನಸ್ಸು ಕಲ್ಲು ! ನಿನ್ನನ್ನು ನಾನು ನೋಯಿಸಿದೆನು. ನಿನ್ನ ಮಾತನ್ನು ನಾನು ನಡೆಯಿಸಲಿಲ್ಲ !" ಎನ್ನುತ್ತ ಯದುಪತಿ ತನ್ನ ಮುಖವನ್ನು ತಾಯಿಯ ತೊಡೆಯ ಮೇಲಿರಿಸಿ ಬಿಕ್ಕುತ್ತ ಅಳತೊಡಗಿದನು.

ಇಂತಹ ಸನ್ನಿವೇಶದಲ್ಲಿಯೆ ಅಲ್ಲವೆ अपि ग्रावा रोदित्यपि दलति वज्रस्य हृदयम् ?

ತಾಯಿಯ ಕರುಳು ಮಮ್ಮಲ ಮರುಗಿತು. "ನನ್ನ ಆ ಮಾತು ಎಷ್ಟೊಂದು ನೋಯಿಸಿತಲ್ಲ ಮಗನನ್ನು ! 'ಈತನ ಮನಸ್ಸು ಕಲ್ಲು !' ಎಂದೆನಲ್ಲವೆ ನಾನು ತನ್ನ ಜೋಳಿಗೆಯನ್ನು ಈತನು ಕೆಳಗಿಡಲಿಲ್ಲವೆಂದು ?" ಎಂದು ಸಾವಕ್ಕನು ಮನಸ್ಸಿನಲ್ಲಿ ಮಿಡುಗಿ, "ಮಗನೆ, ವಿಚಾರವಿಲ್ಲದೆ ನಾನು ಹಾಗೆಂದೆನು. ವಿವೇಕದ ಮಾತಿರಲಿ, ಅವಿವೇಕದ ಮಾತಿರಲಿ ತನ್ನ ಆ ಮಾತು ನಡೆಯದಿದ್ದರೆ ಕರುಳು ನೊಂದು ಏನನ್ನೊ ಎಂದು ಬಿಡುವಳು ತಾಯಿ. ಮಗನೆ, ಎಷ್ಟೊಂದು ನೊಂದುಕೊಂಡಿರುವೆಯಲ್ಲ ! ನನ್ನ ಮಾತಿನಲ್ಲಿ ವಿವೇಕವಿರಲಿಲ್ಲ. ನೀನು ಗುರುವಿನ ಆಜ್ಞೆಯನ್ನು ನಿರ್ಧಾರದಿಂದ ಪಾಲಿಸಿದೆ. ನೀನು ಧೀರ ! ನೀನು ತಪ್ಪು ಮಾಡಿಲ್ಲ. ನೀನು ಗುರುವಿನ ಆಜ್ಞೆಯನ್ನು ಪಾಲಿಸಿದೆಯೆಂದು ನನಗೆ ಈಗ ಸಂತೋಷವು. ನಿನ್ನ ಮನಸ್ಸು ಮಲ್ಲಿಗೆಯ ಹೂ, ನನ್ನಮ್ಮಾ !" ಎಂದು ಅವಳು ಆತನ ಮೈದಡವಿದಳು.

ಪಾರಿಜಾತ ಪುಷ್ಪಗಳ ಪರಿಮಳವು ಮಾತೃಪ್ರೇಮದ ಮಕರಂದದಲ್ಲಿ ಬೆರೆತಿತು. ತಾಯಿಯ ತೊಡೆಯ ಮೇಲೆ ನಿದ್ದೆಹೋದ ಇಬ್ಬರು ಮಕ್ಕಳನ್ನು ನೋಡಿ ನಿಶಾದೇವಿ ನಲಿನಲಿದಳು !

* * * *

೯

“ ಇನ್ನು, ಭಗವಂತಾ, ನೀನು ಓದು,” ಎರಡನೆಯ ವರ್ಗದಲ್ಲಿ ವಿದ್ಯಾರ್ಥಿಗಳಿಂದ ಓದಿಸಿಕೊಳ್ಳುವಾಗ ಪುರುಷೋತ್ತಮರಾಯರು ಎಂದರು. ಭಗವಂತನ ಲಕ್ಷ್ಯವು ಬೇರೆ ಕಡೆಗೆ ಇದ್ದಿತು. “ಭಗವಂತಾ, ನಾನು ಹೇಳಿದುದು ನಿನಗೆ ಕೇಳಿಸಲಿಲ್ಲವೆ?” ಎಂದು ರಾಯರು ಮತ್ತೊಮ್ಮೆ ನುಡಿದರು. ಭಗವಂತನು ಬಡಿದೆಬ್ಬಿಸಿದವರಂತೆ ಅತ್ತಿತ್ತ ನೋಡಿದನು. “ಮುಂದಿನ ಭಾಗವನ್ನು ಓದು, ಭಗವಂತಾ,” ಎಂದು ರಾಯರು ಒತ್ತಿ ಹೇಳಿದುದನ್ನು ಕೇಳಿ, ಈಮೊದಲಿನ ಹುಡುಗನು ಎಲ್ಲಿಯವರೆಗೆ ಓದಿದ್ದನೆಂಬುದನ್ನು ಅರಿಯದ ಭಗವಂತನು, “ಯಾವುದನ್ನು ನಾನು ಓದಬೇಕೊ?” ಎಂದು ಬಳಿಯ ಹುಡುಗನನ್ನು ಮೆಲ್ಲನೆ ಕೇಳಿದನು. “ನೀನು ನಿನ್ನ ಪುಸ್ತಕದಲ್ಲಿಯೆ ನೋಡುತ್ತ ಕುಳಿತಿದ್ದೆಯಲ್ಲ? ಹಿಂದಿನವನು ಓದಿದುದು ಎಲ್ಲಿಯವರೆಗೆ ಎಂಬುದನ್ನು ನೀನು ಹೇಗೆ ಅರಿಯೆ?” ಎನುತ್ತ ಅವನು ಕುಳಿತಲ್ಲಿಗೇ ರಾಯರು ಬಂದು ನೋಡುತ್ತಾರೆ, ಅವನ ಪುಸ್ತಕದಲ್ಲಿ ಬೇರೊಂದು ಕೈ-ಬರೆಹದ ಪುಸ್ತಕವಿದ್ದಿತು. ಭಗವಂತನ ಲಕ್ಷ್ಯವನ್ನು ಈ ಪುಸ್ತಕವು ಸೆಳೆದಿದ್ದಿತು. ಹೊರಗೆ ವರ್ಗದಲ್ಲಿ ಓದಬೇಕಾಗಿದ್ದ ಪುಸ್ತಕವು, ಅದರೊಳಗೆ ತಾನು ಓದುತ್ತಿದ್ದ ಪುಸ್ತಕವು! ಇದೊಂದು ಶಿಕ್ಷಕರ ಕಣ್ಣಲ್ಲಿ ಮಣ್ಣೆರಚುವ ಹುಡುಗರ ರೀತಿ.

ಪುರುಷೋತ್ತಮರಾಯರು ಏನನ್ನೂ ನುಡಿಯದೆ ಆ ಕೈಬರೆಹದ ಪುಸ್ತಕವನ್ನು ತೆಗೆದುಕೊಂಡು ತಮ್ಮ ಸ್ಥಳಕ್ಕೆ ಬಂದರು, ಮತ್ತು ಪುಸ್ತಕವನ್ನು ತೆರೆದು ಒಳಗೆ ನೋಡಿದರು, “ದೇವನಹಳ್ಳಿ ಯದುಪತಿ,” ಎಂದು ಅದರಲ್ಲಿ ಹೆಸರಿದ್ದಿತು. ಬರೆದ ವಿಷಯವು ಧ್ರುವಚರಿತ್ರೆ ಇದ್ದಿತು. ಪುರುಷೋತ್ತಮರಾಯರಿಗೆ ಏನೋ ನೆನಪಾದಂತಾಯ್ತು. ಅವರು ಯಾವುದನ್ನೂ ಹೊರಗೆ ತೋರಗೊಡದೆ ಭಗವಂತನಿಗೆ, “ಭಗವಂತಾ, ಇದೊಂದು ಸಲ ನಿನ್ನನ್ನು ಕ್ಷಮಿಸಿದ್ದೇನೆ. ಇನ್ನು ಮುಂದೆ ಶಿಕ್ಷಕರ ಕಣ್ಣಲ್ಲಿ ಮಣ್ಣೆರಚಲು

ಯತ್ನಿಸಬೇಡ, ” ಎಂದು ನುಡಿದು ಪಾಠವನ್ನು ಸಾಗಿಸಿದರು. ಗಂಟೆಯಾದ ಬಳಿಕ ಅವರು ಭಗವಂತನನ್ನು ತಮ್ಮೊಡನೆ ತಮ್ಮ ಕೋಣೆಗೆ ಕರೆತಂದರು.

“ ಭಗವಂತಾ, ಇದು ಯಾರ ಪುಸ್ತಕವು ?” ಪುರುಷೋತ್ತಮರಾಯರು ಕೇಳಿದರು.

“ ಚಂದ್ರಣ್ಣಮಾವನದು, ಸ್ವಾಮಿ. ”

“ ಯಾರೊ ಚಂದ್ರಣ್ಣಮಾವನು ?”

“ ನಮ್ಮ ಅಪ್ಪನ ಅಣ್ಣ. ”

“ ಪುಸ್ತಕವು ನಿನ್ನ ಕೈಗೆ ಹೇಗೆ ಬಂದಿತು ?”

“ ಮಿಠಾಯಿಗಳನ್ನು ಕೊಡುತ್ತೇನೆ, ಬನ್ನಿರಿ, ಎಂದು ಅವನು ನನ್ನನ್ನು ಮತ್ತು ತಂಗಿಯನ್ನು ಇಂದು ಬೆಳಗಿನಲ್ಲಿ ತನ್ನ ಕೋಣೆಗೆ ಕರೆದನು. ನಾವು ಅವನ ಬಳಿಗೆ ಹೋದೆವು. ಅವನು ಒಂದು ಚೀಲದೊಳಗಿಂದ ತಾನು ತಂದ ಬೆಂಡುಬತ್ತಾಸಗಳನ್ನು ಕೆಳಗೆ ಸುರುವಿದನು. ಆಗ ಈ ಪುಸ್ತಕವು ಬಿದ್ದಿತು. ‘ ಇದನ್ನು ನಾನು ತೆಗೆದುಕೊಳ್ಳಲಾ?’ ಎಂದು ನಾನು ಕೇಳಿದೆನು. ‘ತೆಗೆದುಕೊಳ್ಳು, ’ ಎಂದನು. ಅದನ್ನು ನಾನು ತೆಗೆದುಕೊಂಡು ನನ್ನ ಪುಸ್ತಕಗಳಲ್ಲಿ ಇಟ್ಟುಕೊಂಡೆನು.”

“ ನಿಮ್ಮ ಚಂದ್ರಣ್ಣಮಾವನು ನಿಮ್ಮಲ್ಲಿಯೆ ಇರುತ್ತಾನೆಯೆ ?”

“ ಅಹುದು, ಸ್ವಾಮಿ”

“ ಏನು ಕೆಲಸವನ್ನು ಮಾಡುತ್ತಾನೆ ?”

“ ನನಗೆ ಗೊತ್ತಿಲ್ಲ, ಸ್ವಾಮಿ.”

“ ಅವನು ಮಲಗುವುದು ಕೂಡುವುದು ಎಲ್ಲವೂ ನಿಮ್ಮಲ್ಲಿಯೆ, ?”

“ಈ ಊರಲ್ಲಿ ಇದ್ದಾಗ ನಮ್ಮಲ್ಲಿಯೆ ಅವನು ಮಲಗುವುದು ಕೂಡುವುದು”

“ ಯಾವಾಗಲೂ ಅವನು ಈ ಊರಲ್ಲಿಯೆ ಇರುವುದಿಲ್ಲವೊ ?”

“ ಇಲ್ಲ,ಸ್ವಾಮಿ. ವಾರದಲ್ಲಿ ಒಂದೆರಡು ದಿನ ಇಲ್ಲಿ ಇರುತ್ತಾನೆ.”

“ ಅವನ ವಯಸ್ಸು ಎಷ್ಟು?”

“ ಅವನು ನಮ್ಮ ಶಾಲೆಯ ಸಿಪಾಯಿ ಇಮಾಮುಸಾಹೇಬನಷ್ಟು ಇರುವನು. ”

“ ಅವನು ಊರಿಂದ ಎಂದು ಬಂದನು?”

“ ನಿನ್ನೆ ರಾತ್ರಿ, ಸ್ವಾಮಿ.”

"ಇನ್ನು ನೀನು ಹೋಗು. ಇನ್ನು ಮುಂದೆ ವರ್ಗದಲ್ಲಿ ಪಾಠದ ಕಡೆಗೆ ಲಕ್ಷ್ಯವಿರಲಿ—"

"ಪುಸ್ತಕವನ್ನು ಕೊಡುವಿರಾ?"

"ಇರಲಿ ನನ್ನ ಬಳಿಯಲ್ಲಿ."

ಭಗವಂತನು ತಿರುಗಿ ವರ್ಗಕ್ಕೆ ಬಂದನು. ಪುರುಷೋತ್ತಮರಾಯರು ಬಳಿಕ ಯದುಪತಿಯನ್ನು ಕರೆಯಿಸಿ ಏನನ್ನೋ ಕೇಳಿಕೊಂಡು ಆತನನ್ನು ತಿರುಗಿ ಕಳಿಸಿದರು. ಈ ಸಂಗತಿ ನಡೆದುದು ಯದುಪತಿ ರಾಮಪುರಕ್ಕೆ ಬಂದ ಬಳಿಕ ಎಂಟು ತಿಂಗಳುಗಳ ತರುವಾಯದಲ್ಲಿ.

ಒಂದು ಸಂಜೆಯ ನಾಲ್ಕು ಗಂಟೆಯ ಹೊತ್ತಿಗೆ ಪೋಲಿಸ್ ಇನ್ಸ್ಪೆಕ್ಟರರು ಐದಾರು ಜನ ಪೋಲಿಸರೊಡನೆ ಧನಮಲ್‌ಶೇಟಜಿ ಎಂಬ ಮಾರವಾಡಿಯ ಮನೆಗೆ ಬಂದು ಕೆಲವು ಪೋಲಿಸರನ್ನು ಹೊರಗೆ ನಿಲ್ಲಿಸಿ, ಕೆಲವರೊಡನೆ ಒಳಗೆ ಬಂದರು. ಆಗ ಶೇಟಜಿ ಚಂದ್ರಣ್ಣನೊಡನೆ ಮಾತನಾಡುತ್ತ ಕುಳಿತಿದ್ದನು. ಹತ್ತಿರದಲ್ಲಿ ಹಲವಾರು ಬೆಳ್ಳಿಬಂಗಾರದ ಸಾಮಾನುಗಳು ಇದ್ದುವು. ಇನ್ಸ್ಪೆಕ್ಟರರು ಬಂದು ಶೇಟಜಿಗೆ ಒಂದು ಕಾಗದವನ್ನು ತೋರಿಸಿ " ಶೇಟಜಿ, ಈಗ ನೀವು ನಮ್ಮ ಅಧೀನರು. ನಿಮ್ಮ ಮನೆಯನ್ನು ನಾವು ಶೋಧಿಸಬೇಕು. ಈ ಮನುಷ್ಯನೂ ನಮ್ಮ ಅಧೀನನಾಗಿರುವನು, " ಎಂದು ನುಡಿದು ಅವರು ಒಬ್ಬ ಪೋಲಿಸನಿಗೆ ಚಂದ್ರಣ್ಣನಿಗೆ ಕೈಕೋಳವನ್ನು ತೊಡಿಸಲು ಹೇಳಿದರು, ಮತ್ತು ಕೈಕೋಳವನ್ನು ಅವನಿಗೆ ತೊಡಿಸುವುದಾದ ಬಳಿಕ ಅವನನ್ನು ಇಬ್ಬರು ಪೋಲಿಸರ ವಶಕ್ಕೆ ಕೊಟ್ಟು ಚಾವಡಿಗೆ ಒಯ್ಯಲು ಹೇಳಿದರು. ಅಷ್ಟರಲ್ಲಿ ಬೇರೆ ನಾಲ್ವರು ಪೋಲಿಸರು ನಾಲ್ಕಾರು ಪ್ರತಿಷ್ಠಿತ ಜನರೊಡನೆ ಅಲ್ಲಿಗೆ ಬಂದರು. ಒಂದು ಒಂದುವರೆ ಗಂಟೆ ಶೋಧವು ನಡೆಯಿತು. ಎಷ್ಟೋ ಬೆಳ್ಳಿಬಂಗಾರದ ಸಾಮಾನುಗಳು, ಬಟ್ಟೆಗಳ, ಪಾತ್ರೆಗಳ ಮತ್ತು ಕಾಗದಪತ್ರಗಳ ರಾಶಿಗಳು ಬಿದ್ದುವು. ಅವುಗಳ ಯಾದಿ ಸಿದ್ಧವಾಯ್ತು. ಪಂಚನಾಮೆ ಮೊದಲಾದ ವಿಧಿ ಆಯ್ತು. ಬಂದ ಪ್ರತಿಷ್ಠಿತರು ತಮ್ಮ ಅಂಕಿತಗಳನ್ನು ಹಾಕಿದರು. ಎಲ್ಲ ವಸ್ತುಗಳನ್ನು ಪೋಲಿಸರು ತಮ್ಮ ವಶದಲ್ಲಿ ತೆಗೆದುಕೊಂಡು ಒಂದು ಚಕ್ಕಡಿಯಲ್ಲಿ ತುಂಬಿಕೊಂಡು ಒಯ್ದರು. ಶೇಟಜಿಯೂ ಇನ್ಸ್ಪೆಕ್ಟರರೊಡನೆ ಚಾವಡಿಗೆ ಹೋಗಬೇಕಾಯ್ತು. ಅದೇ ಸಮಯದಲ್ಲಿ

ಮತ್ತೊಬ್ಬ ಅಧಿಕಾರಿ ಚಂದ್ರಣ್ಣನಿರುವ ಮನೆಯನ್ನು ಶೋಧಿಸಿ ಕೆಲವು ವಸ್ತುಗಳನ್ನು ಚಾವಡಿಗೆ ತಂದರು. ಇದೇ ಬಗೆಯಾಗಿ ಪೋಲಿಸರು ಅಂದು ಬೇರೆ ಏಳೆಂಟು ಮನೆಗಳನ್ನು ಶೋಧಿಸಿದುದಲ್ಲದೆ ಇಪ್ಪತ್ತು ಇಪ್ಪತ್ತೈದು ಜನರನ್ನು ಸೆರೆಹಿಡಿದರು.

ಧನಮಲ್‌ಶೇಟಜಿ ರಾಮಪುರದಲ್ಲಿ ಸಾಮಾನ್ಯಮನುಷ್ಯನಾಗಿರಲಿಲ್ಲ. ಅವನು ಪ್ರತಿಷ್ಠಿತರಲ್ಲಿ ಎಣಿಸಲ್ಪಡುತ್ತಿದ್ದನು. ಅವನಲ್ಲಿ ಹಣವು ಹೇರಳವಾಗಿದ್ದಿತು. ಭೂಮಿಯೂ ಅವನಿಗೆ ಬೇಕಾದಷ್ಟು ಇದ್ದಿತು. ಅವನು ವಾಸಿಸುತ್ತಿದ್ದ ಮನೆ ರಾಜಮಂದಿರದಂತೆ ಭವ್ಯವಾಗಿತ್ತು. ಇದಲ್ಲದೆ ಬೇರೆ ಎಷ್ಟೋ ಮನೆಗಳು ಅವನಿಗಿದ್ದುವು. ದೊಡ್ಡ ಅಧಿಕಾರಿಗಳೂ ಸಿರಿವಂತರೂ ಅವನ ಈ ಮನೆಗಳಲ್ಲಿ ಇರುತ್ತಿದ್ದರು. ದಾನಧರ್ಮವು ಅವನಲ್ಲಿ ಅವಿಚ್ಛಿನ್ನವಾಗಿ ನಡೆಯುತ್ತಿತ್ತು. ಅನೇಕ ಸಂಸ್ಥೆಗಳಿಗೆ ಅವನಿಂದ ಧನಸಾಹಾಯ್ಯವು ದೊರೆಯುತ್ತಿತ್ತು. ದೊಡ್ಡದೊಡ್ಡ ಅಧಿಕಾರಿಗಳಿಗೋಸುಗ ಆಗಾಗ ಅವನಲ್ಲಿ ಭೋಜನಸಮಾರಂಭಗಳು ಜರುಗುತ್ತಿದ್ದುವು. ಇಷ್ಟೆಲ್ಲವೂ ಇದ್ದ ಬಳಿಕ ಜನರಿಂದ ಅವನಿಗೆ ಮಾನ ಸನ್ಮಾನಗಳು ಮತ್ತು ಗೌರವ ಪ್ರತಿಷ್ಠೆಗಳು ದೊರೆಯುತ್ತಿದ್ದುದು ಆಶ್ಚರ್ಯವಲ್ಲ. ಆದರೆ, ಆದರೆ !

ಶೇಟಜಿಯಲ್ಲಿ ಇಷ್ಟು ದುಡ್ಡು ಸಂಗ್ರಹವಾಗಬೇಕಾದರೆ ಎಷ್ಟು ಬಡ ಜನರು ಗೋಳಾಡಬೇಕಾಗುತ್ತಿತ್ತು ? ಎಷ್ಟು ಮನುಷ್ಯರು ಬಡವರಾಗಬೇಕಾಗುತ್ತಿತ್ತು? ಎಷ್ಟು ಮಂದಿ ಮನುಷ್ಯತ್ವವನ್ನು ಕಳೆದುಕೊಳ್ಳಬೇಕಾಗುತ್ತಿತ್ತು? ಅವನಿಗೆ ಮಾನ ಸನ್ಮಾನಗಳನ್ನು ಗೌರವಪ್ರತಿಷ್ಠೆಗಳನ್ನು ಸಲ್ಲಿಸುವವರು ಈ ವಿಚಾರವನ್ನೇ ಮಾಡದಿದ್ದುದು ಆಶ್ಚರ್ಯವಲ್ಲವೆ ? ಆದರೆ, ಆದರೆ !

ದುಡ್ಡು ಜಗತ್ತನ್ನು ಕುಣಿಸುತ್ತಿರುವವರೆಗೆ ಪ್ರಾಣಪೋಷಕ ವಿಚಾರಗಳತ್ತ ಸಾಮಾನ್ಯಮನುಷ್ಯನ ಮನಸ್ಸು ಒಲಿಯದು. ಮಾನವನಿಗೆ ದುಡ್ಡು ಬೇಕು. ಆದರೆ ಅದು ನಮ್ಮನ್ನು ಕುಣಿಸಕೂಡದು. ಅದು ಜಡವು. ಜಡವಸ್ತುಗಳ ಉಪಯೋಗವು ಮಾನವನಿಗೆ ಉಂಟು. ಆದರೆ ಜಡವಸ್ತುಗಳು ಮಾನವನಿಗೆ ಅಧೀನವಾಗಿರಬೇಕಲ್ಲವೆ ಮಾನವನು ಅವಕ್ಕೆ ಅಧೀನನಾಗಿರುವುದು ಎಲ್ಲಿಯ ನ್ಯಾಯವು ? ನ್ಯಾಯಾನ್ಯಾಯಗಳ ವಿಚಾರವನ್ನೇ ದುಡ್ಡಿನ ಮೋಹದಿಂದ ನಾವು ಕಳೆದುಕೊಂಡು ಆತ್ಮನಾಶಕ್ಕೆ ಗುರಿಯಾಗುವುದು ಯಾವ ನ್ಯಾಯವು ?

ಧನಮುಲ್‌ಶೇಟಜಿ ವಿದ್ಯಾವಂತನಲ್ಲ, ದಾನಮಾಡುತ್ತಿದ್ದರೂ ದಯಾವಂತನಾಗಿರಲಿಲ್ಲ, ಧರ್ಮಮಾಡುತ್ತಿದ್ದರೂ ಧರ್ಮಬುದ್ಧಿ ಅವನಿಗಿರಲಿಲ್ಲ. ಆದರೆ ಜನರ ದೃಷ್ಟಿಯಲ್ಲಿ ಅವನು ದೊಡ್ಡವನಾಗದೆ ಇರಲಿಲ್ಲ! ದುಡ್ಡು ಇದ್ದಿತಲ್ಲ ಅವನಲ್ಲಿ! ವಿದ್ಯಾನಿಧಿಗಳ, ದಯಾಶೀಲರ ಮತ್ತು ಧರ್ಮಾತ್ಮರ ಮಂಗಲಜೀವನದಿಂದ ಜಗತ್ತು ಬದುಕಿದೆ, ಆದರೆ ಧನಮುಲ್‌ಶೇಟಜಿಯಂತಹ ಧನವಂತರ ದಾನಧರ್ಮಗಳಿಂದಲ್ಲ. ಧನಮುಲ್‌ಶೇಟಜಿಯ ಜೀವನವು ಅಮಂಗಲವಾಗಿದ್ದಿತು. ಅವನಂತಹ ವ್ಯಕ್ತಿಗಳನ್ನು ದೊಡ್ಡವರ ಪಂಕ್ತಿಯಲ್ಲಿ ಕುಳ್ಳಿರಿಸುವ ಸಮಾಜದ ಬುದ್ಧಿ ಎಷ್ಟು ವಿಕೃತವಾಗಿದೆಂಬುದು ವಿಚಾರಮಾಡಲು ಯೋಗ್ಯವಾದ ಮಾತಾಗಿದೆ.

ಧನಮುಲ್‌ಶೇಟಜಿಯ ಧನರಾಶಿ ಮುಗಿಲೆತ್ತರವಾದುದು ಚಂದ್ರಣ್ಣನಂತಹ ಸಮಾಜಕಂಟಕರು ಅವನಿಗೆ ಹಸ್ತಕರಾಗಿದ್ದರೆಂದು. ಶೇಟಜಿಗೆ ಸಮಾಜಕಂಟಕರ ಸಾಹಾಯ್ಯವು, ಸಮಾಜಕಂಟಕರಿಗೆ ಶೇಟಜಿಯ ಸಾಹಾಯ್ಯವು! ದೇವರ ಗುಡಿಗಳಲ್ಲಿ ವಸ್ತಿಗೆಂದು ಬಂದವರ ಸಾಮಾನುಗಳನ್ನೂ ಕದ್ದೊಯ್ಯಲು ಹಿಂಜರಿಯದ ಚಂದ್ರಣ್ಣನಂತಹ ಪಾಪಕಾರಿಗಳಿಗೆ ಆಶ್ರಯವಿತ್ತು ಧನಾಢ್ಯರಾದ ಸಮಾಜ ದ್ರೋಹಿಗಳನ್ನು ದೊಡ್ಡವರ ಪಂಕ್ತಿಯಲ್ಲಿ ಕುಳ್ಳಿರಿಸುವ ಸಮಾಜವೇ, ನೀನು ಆತ್ಮಘಾತವನ್ನು ಮಾಡಿಕೊಳ್ಳುತ್ತಿರುವೆ ಎಂಬುದು ನಿನ್ನ ಲಕ್ಷ್ಯದಲ್ಲಿ ಬೇಗನೆ ಬಂದಷ್ಟು ನಿನಗೆ ಒಳಿತು!

ಅಂದು ಶಾಲೆ ಬಿಟ್ಟ ಬಳಿಕ ಯದುಪತಿ ವಾಡಿಕೆಯಂತೆ ಪುರುಷೋತ್ತಮರಾಯರ ಮನೆಗೆ ಬಂದನು. ಲಕ್ಷ್ಮೀಬಾಯಿ ಹೊರಗೆ ಹೋಗುವ ಸಿದ್ಧತೆಯಲ್ಲಿದ್ದರು. ಯದುಪತಿ ಬಂದುದನ್ನು ಕಂಡು ಅವರು, “ಬಾ, ಯದುಪತೀ, ಕೈಕಾಲುಗಳನ್ನು ತೊಳೆದುಕೊಳ್ಳು,” ಎಂದು ಹೇಳಿ, ಆತನು ಬಚ್ಚಲು ಕೋಣೆಯಿಂದ ತಿರುಗಿ ಬಂದ ಬಳಿಕ ಒಂದು ತಟ್ಟೆಯಲ್ಲಿ ಎರಡು ಮೊಸರು ವಡೆಗಳನ್ನು ಮತ್ತು ಎರಡು ಬಾಳೆಹಣ್ಣುಗಳನ್ನು ಇಟ್ಟು ಆತನಿಗೆ ತಿನ್ನಲು ಕೊಟ್ಟರು. ಆತನು ಅವನ್ನು ತಿಂದು ನೀರು ಕುಡಿದ ಬಳಿಕ ಲಕ್ಷ್ಮೀಬಾಯಿ ಎಂದರು, “ಯದುಪತೀ, ನಾಳೆ ದಮಯಂತಿಯ ಹುಟ್ಟಿದ ದಿನ, ರಾಧಮ್ಮನವರಿಗೆ ಮತ್ತು ಸಾವಕ್ಕನಿಗೆ ಊಟದ ಔತಣವನ್ನು ಕೊಡಬೇಕು. ನನ್ನೊಡನೆ

ನೀನೂ ಬಾ. ಆಚಾರ್ಯರಿಗೆ ಮತ್ತು ಬೀರಣ್ಣನಿಗೆ ಅವರು ಔತಣವನ್ನು ಮುಟ್ಟಿಸುವರು. ಯದುಪತೀ, ನಿನ್ನ ಹುಟ್ಟಿದದಿನ ಎಂದು ?''

"ಇಂದೇ, ತಾಯೀ; ಮಾರ್ಗಶೀರ್ಷ ಅಷ್ಟಮಿಯ ದಿನ ನಾನು ಹುಟ್ಟಿದುದು.''

"ನಿನ್ನ ಹುಟ್ಟಿದ ದಿನವನ್ನು ನಿನ್ನ ತಾಯಿ ಮಾಡುತ್ತಿದ್ದರಲ್ಲವೆ ?''

"ಮಾಡುತ್ತಿದ್ದಳು.''

"ಇಂದು ನಿನ್ನ ಹುಟ್ಟಿದದಿನವೆಂದು ರಾಧಮ್ಮನವರಿಗೆ ನೀನು ತಿಳಿಸಿದೆಯಾ ? ನನಗಂತು ತಿಳಿಸಿಲ್ಲ.''

"ಇಲ್ಲ.''

"ಸಾವಕ್ಕನಿಗಾದರೂ ತಿಳಿಸಿದೆಯಾ ?''

"ಇಲ್ಲ.''

"ಏಕೆ ತಿಳಿಸಲಿಲ್ಲ ?''

ಯದುಪತಿ ಸುಮ್ಮನಿದ್ದನು.

"ಯದುಪತೀ, ನಿನ್ನ ಆ ತಾಯಿ ಹೋದರು. ಆದರೆ ನಾವು ಮೂವರು ತಾಯಂದಿರು ಈಗ ನಿನಗೆ ಇರುವೆವಲ್ಲವೆ ? ಒಬ್ಬರಿಗಾದರೂ ನೀನು ತಿಳಿಸಬೇಕಿತ್ತಯ್ಯಾ. ನಮ್ಮೊಡನೆ ಸಂಕೋಚವೆ ? ನಿನ್ನ ತಾಯಿ ಏನು ಮಾಡುತ್ತಿದ್ದರಯ್ಯಾ ಅಂದು ?''

"ಬೆಳಗಿನಲ್ಲಿ ನನಗೆ ಅವಳು ಎಣ್ಣೆಹೂಸಿ ಎರೆಯುತ್ತಿದ್ದಳು. ಮಧ್ಯಾಹ್ನದ ಊಟಕ್ಕೆ ನನ್ನ ಓರಿಗೆಯ ಇಬ್ಬರು ಮೂವರು ಗೆಳೆಯರನ್ನು ಕರೆಯುತ್ತಿದ್ದಳು. ನೆರೆಮನೆಯ ರಂಗಕ್ಕನು ಅಂದು ನಮ್ಮಲ್ಲಿ ಮುತ್ತೈದೆ. ಸಂಜೆಗೆ ಆರತಿಯನ್ನು ಅವರೇ ಮಾಡುತ್ತಿದ್ದರು.''

"ಸರಿ. ಯದುಪತೀ, ಇಂದು ನಿನ್ನ ಹುಟ್ಟಿದ ದಿನವು, ನಾಳೆ ಬೆಳೆದ ದಿನವು. ನಾಳೆ ದಮಯಂತಿಯ ಹುಟ್ಟಿದ ದಿನವನ್ನೂ ನಿನ್ನ ಬೆಳೆದ ದಿನವನ್ನೂ ಕೂಡಿಯೆ ಮಾಡುವ,'' ಎಂದು ಲಕ್ಷ್ಮಿಬಾಯಿ ಯದುಪತಿಯೊಡನೆ ಆಚಾರ್ಯರ ಮನೆಯ ಕಡೆಗೆ ಹೊರಟರು.

ದಾರಿಯಲ್ಲಿ ಅಂದು ಜನಸಂದಣಿ ದಿನಕ್ಕಿಂತ ಹೆಚ್ಚಾಗಿದ್ದಿತು. ಯಾರು ಯಾರಿಗೆ ಏನೇನೋ ಕೆಲಸವು. ಬಾಲಸುಟ್ಟ ಬೆಕ್ಕಿನಂತೆ ಜನವು ಸಮತೆಗೆಟ್ಟು

ಸುಳಿದಾಡುತ್ತಿದ್ದಿತು. ನಿಧಾನ, ತಾಳ್ಮೆ ಎಂಬುದು ಎಲ್ಲಿಯೂ ಇರಲಿಲ್ಲ. ಕೆಲವರು ಬೆರಳುಗಳಿಂದ ಲೆಕ್ಕಹಾಕುತ್ತ ಮೌನದಿಂದ ನಡೆದಿದ್ದರೂ ಅವರ ತುಟಿಗಳು ಪಿಟುಗುಡುತ್ತಲೆ ಇದ್ದುವು, ಅವರ ಗೋಣು ಒಂದೇಸವನೆ ಆ ಆ ಸಮಯದ ವಿಚಾರಗಳಿಗನುಸಾರವಾಗಿ ಅತ್ತಿಂದಿತ್ತ ಇತ್ತಿಂದತ್ತ, ಹಿಂದು ಮುಂದು ಒಲೆಯುತ್ತಲೆ ಇದ್ದಿತು. ಕೆಲವರು ಕೂಗುತ್ತ ನಡೆದಿದ್ದರು. ಆ ಉಚ್ಚಧ್ವನಿಯನ್ನು ಅವರು ಯಾವ ಸಾಧನೆಯಿಂದ ಸಂಪಾದಿಸಿದ್ದರೊ! ಒಂದೆಡೆಯಲ್ಲಿ ತಾಯಿಯನ್ನು ತಪ್ಪಿಸಿಕೊಂಡ ಮಗು, ಮತ್ತೊಂದೆಡೆಯಲ್ಲಿ ಮಗುವನ್ನು ಕಳೆದುಕೊಂಡ ತಾಯಿ ಕರುಳು ಕರಗುವಂತೆ ಅಳುತ್ತೆ ನಡೆದಿದ್ದರು. ಆದರೆ ಅಷ್ಟು ಜನರಲ್ಲಿ ಎಷ್ಟು ಜನರ ಕರುಳು ಕೊರಗಿತೊ ? ದೇವಾಂಶನಾದ ಮಾನವನೆ, ನೀನು ನಿರ್ಘೃಣನಾದ ನೃಶಂಸನಾಗುತ್ತಿರುವೆಯಲ್ಲ! ನಿನ್ನ ಅಂತಃ ಪ್ರವೃತ್ತಿ ಸ್ವಾಭಾವಿಕವಾಗಿ ಊರ್ಧ್ವಶಿಖವಾಗಿದೆಂಬುದನ್ನು ಮರೆತು ಅದನ್ನು ಅಧೋಮುಖವಾಗಿಸಿ ಆತ್ಮನಾಶಕ್ಕೆ ಧಾವಿಸುವುದುಚಿತವೆ ? ಲಕ್ಷ್ಮೀಬಾಯಿ ಯದುಪತಿಯೊಡನೆ ಹೇಗೊ ಆ ಗದ್ದಲದೊಳಗಿಂದ ದಾರಿಮಾಡಿ ಕೊಂಡು ನಡೆದರು.

ಆಚಾರ್ಯರ ಮನೆ ಬಂದಿತು. ಹೊರಗೆ ಹತ್ತಿಪ್ಪತ್ತು ಜನರು ಗುಂಪಾಗಿ ನೆರೆದಿದ್ದರು. ಅವರ ಮುಖದ ಮೇಲೆ ಉದ್ವೇಗ ಮತ್ತು ಚಿಂತೆ ಕಾಣಿಸುತ್ತಿ ದ್ದುವು. ಲಕ್ಷ್ಮೀಬಾಯಿಗೂ ಯದುಪತಿಗೂ ಹೆದರಿಕೆಯಾಯ್ತು. ಅವರು ಸಚಿಂತರಾಗಿ ಮನೆಯೊಳಗೆ ಬಂದರು.

ಮನೆಯೊಳಗೆ ಎಲ್ಲಿಯೂ ಮೌನವು, ಮನಸ್ಸನ್ನು ವ್ಯಗ್ರವಾಗಿಸುವ ಮೌನವು. ಆಚಾರ್ಯರು ತಮ್ಮ ಕೋಣೆಯಲ್ಲಿ ಮಂಚದಮೇಲೆ ಮಲಗಿ ದ್ದಾರೆ. ತಲೆ ಹಣೆ ಹೊಟ್ಟೆ ಬೆನ್ನುಗಳ ಮೇಲೆ ಅರಿವೆಯ ಪಟ್ಟಿಗಳಿವೆ. ಅವರಿಗೆ ಪ್ರಜ್ಞೆಯಿಲ್ಲ. ರಾಧಮ್ಮನವರು ಅವರ ತಲೆಯನ್ನು ತಮ್ಮ ತೊಡೆಯ ಮೇಲೆ ಇರಿಸಿಕೊಂಡು ಕುಳಿತಿದ್ದಾರೆ. ಡಾಕ್ಟರ್ ಶಾಮ್ಯರಾಯರು ಅವರ ಕೈಯನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ನಾಡಿಯನ್ನು ಪರೀಕ್ಷಿಸುತ್ತಿದ್ದಾರೆ. ಪುರುಷೋತ್ತಮರಾಯರು ಮತ್ತು ಬೀರಣ್ಣನು ಮಂಚದ ಬಳಿಯಲ್ಲಿ ನಿಂತಿ ದ್ದಾರೆ. ಸಾವಕ್ಕನು ಬಾಗಿಲ ಹತ್ತಿರ ನಿಂತಿದ್ದಾಳೆ.

ಲಕ್ಷ್ಮೀಬಾಯಿ ಕೋಣೆಯಲ್ಲಿ ಹಣಿಕಿ ನೋಡಿ ಬಾಗಿಲ ಹೊರಬದಿಯಲ್ಲಿ ನಿಂತರು. ಯದುಪತಿ ಒಳಗೆ ಹೋಗಿ ಸಾವಕ್ಕನ ಬಳಿಯಲ್ಲಿ ನಿಂತನು. ಇಷ್ಟು ಹೊತ್ತು ಗಂಭೀರವಾಗಿ ಕುಳಿತಿದ್ದ ಡಾಕ್ಟರರ ಮುಖವು ಅರಳಿತು. ಮುಂದೆ ಸ್ವಲ್ಪ ಹೊತ್ತಿನಲ್ಲಿ ಆಚಾರ್ಯರು ಕಣ್ದೆರೆದು ನಿಟ್ಟುಸಿರಿಟ್ಟು ಮತ್ತೆ ಕಣ್ಣುಮುಚ್ಚಿದರು. ಈ ವರೆಗೆ ನಿಸ್ತೇಜವಾಗಿದ್ದ ಅವರ ಮುಖದಲ್ಲಿ ಶಾಂತಿ ತೋರತೊಡಗಿತು. ಅದರಿಂದ ಸುತ್ತಲು ನಿಂತವರೆಲ್ಲರಿಗೂ ಸ್ವಲ್ಪ ಸಮಾಧಾನ ವಾಯ್ತು. ಆಚಾರ್ಯರು ಮತ್ತೆ ಕಣ್ದೆರೆದು ಸುತ್ತಲು ನೋಡಿದರು, ನೀರು ಬೇಕೆಂದು ಸಂಜ್ಞೆಯಿಂದ ತಿಳಿಸಿದರು. ಸಾವಕ್ಕನು ಒಳಗೆ ಹೋಗಿ ನೀರನ್ನು ತಂದು ರಾಧಮ್ಮನವರ ಕೈಯಲ್ಲಿ ಕೊಟ್ಟಳು. ಅವರು ಹನಿಹನಿಯಾಗಿ ಆಚಾರ್ಯರಿಗೆ ಕುಡಿಸಿದರು. ನೀರು ಕುಡಿದು ಆಚಾರ್ಯರು, "ಆರಾಮವಿದೆ, ಚಿಂತೆಮಾಡಬೇಡಿರಿ," ಎಂದು ಸಂಜ್ಞೆಯಿಂದ ಎಲ್ಲರಿಗೆ ಸಮಾಧಾನ ಹೇಳಿದರು. "ಯಾವ ಭಯವೂ ಇಲ್ಲ, ನಿಶ್ಚಿಂತರಾಗಿರಿ," ಎಂದು ಡಾಕ್ಟರರು ನಿಂತವರಿಗೆ ಅಭಯವಿತ್ತು ಮತ್ತೆ ಎಂದರು, "ಗಾಯಗಳು ತೀವ್ರವಾಗಿದ್ದರೂ ಭಯಕ್ಕೆ ಕಾರಣವಿಲ್ಲ. ಎಲವುಗಳಿಗೆ ಪೆಟ್ಟು ತಟ್ಟಿಲ್ಲ. ಜ್ಞಾನತಂತುಗಳಿಗಾದ ಆಘಾತವು ಚಿಂತೆಗೆ ಕಾರಣವಾಗುವಷ್ಟು ತೀವ್ರವಾಗಿತ್ತು. ಪರಮಾತ್ಮನ ಕೃಪೆಯಿಂದ ನಾನು ನಿರೀಕ್ಷಿಸಿದುದಕ್ಕಿಂತಲೂ ಬೇಗನೆ ಆಚಾರ್ಯರಿಗೆ ಪ್ರಜ್ಞೆ ಬಂದಿತು. ಇನ್ನು ಸ್ವಲ್ಪ ಹೊತ್ತಾದ ಮೇಲೆ ಅವರಿಗೆ ಹಾಲು ಬೇಕಾದರೆ ಕೊಡಿರಿ. ನಾನು ಈಗ ಹೋಗಿ ರಾತ್ರಿ ಎಂಟುಗಂಟೆಗೆ ಬಂದು ನೋಡುವೆನು. ಈಶ್ವರನ ಕೃಪೆಯಿಂದ ಭೀತಿ ದೂರಾಗಿದೆ. ನಿಶ್ಚಿಂತರಾಗಿರಿ." ಬಳಿಕ ಅವರು ಆಚಾರ್ಯರತ್ತ ತಿರುಗಿ, "ನಾನು ಹೋಗಿ ಬರಲಾ ? ರಾತ್ರಿ ಇನ್ನೊಮ್ಮೆ ಬರುವೆನು," ಎಂದರು. ಆಚಾರ್ಯರು ಕೈಜೋಡಿಸಿದರು. ಡಾಕ್ಟರರು ಹೋದರು.

ಡಾಕ್ಟರರು ಹೋದಬಳಿಕ ಪುರುಷೋತ್ತಮರಾಯರು ರಾಧಮ್ಮನವರಿಗೆ ಎಂದರು, "ತಾಯೀ, ನಾನು ಮತ್ತು ಬೀರಣ್ಣನು ಆಚಾರ್ಯರ ಹತ್ತಿರ ಇರುವೆವು. ನೀವು ಇನ್ನು ಒಳಗೆ ಹೋಗಬಹುದಲ್ಲವೆ ?" ರಾಧಮ್ಮನವರು ಆಚಾರ್ಯರ ಮುಖದ ಕಡೆಗೆ ನೋಡಿದರು. "ಅಹುದು, ನೀನು ಹೋಗ

ಬಹುದು, " ಎಂದು ಆಚಾರ್ಯರು ಮೆಲ್ದನಿಯಲ್ಲಿ ನುಡಿದರು. ರಾಧಮ್ಮ ನವರು ಎದ್ದು ಸಾವಕ್ಕನೊಡನೆ ಅಲ್ಲಿಂದ ಹೋದರು.

ಯದುಪತಿ ಮೆಲ್ಲನೆ ಆಚಾರ್ಯರ ಬಳಿಗೆ ಬಂದನು. ಅವರು ಅತನನ್ನು ತಮ್ಮ ಬಳಿಯಲ್ಲಿ ಕುಳ್ಳಿರಿಸಿಕೊಂಡು, ಅತನ ಕೈಯನ್ನು ತಮ್ಮ ಕೈಯಲ್ಲಿ ತೆಗೆದುಕೊಂಡರು. ಇಷ್ಟು ಹೊತ್ತಿನವರೆಗೆ ಅತನು ತಡೆದಿದ್ದ ಕಣ್ಣೀರು ಕೋಡಿವರಿಯಿತು. "ಶಾಂತಿ, ಮಗು, ಶಾಂತಿ! ಭಯವಿಲ್ಲವೆಂದು ಡಾಕ್ಟರರು ಹೇಳಲಿಲ್ಲವೆ ?" ಎಂದು ಆಚಾರ್ಯರು ಆತನನ್ನು ಸಮಾಧಾನಗೊಳಿಸಲು ನುಡಿದರು.

"ಎಷ್ಟೊಂದು ಕಡೆಯಲ್ಲಿ ನೋವಾಗಿದೆಯಲ್ಲ, ಗುರುಗಳೆ ! ವೇದನೆ ಯನ್ನು ಸಹಿಸುವುದು ಹೇಗೆ ?"

"ಅಹುದು, ಮಗು, ನೋವಾಗಿದೆ. ಆದರೂ ಧೈರ್ಯದಿಂದ ಸಹಿಸ ಬೇಕು. ಯದುಪತೀ, ಇಂದು ಶುಕ್ರವಾರ; ಲಕ್ಷ್ಮೀಪೂಜೆಯಾಗಬೇಕು. ನೀನೇ ಮಾಡಯ್ಯಾ. ಇನ್ನು ಕೈಕಾಲು ತೊಳೆದುಕೊಳ್ಳು, ಹೋಗು ಶಾಂತ ಮನಸ್ಸಿ ನಿಂದ ಪೂಜೆಮಾಡು. ಸಂಗೀತ ಸೇವೆಗೆ ನಿನ್ನ ಕಲಿತ ಹಾಡನ್ನು ಹಾಡು. ಪುರುಷೋತ್ತಮರಾಯರೆ, ಬೀರಣ್ಣಾ, ನೀವು ಇಂದು ಇಲ್ಲಿಯೆ ಇರಬೇಕಾಗುವು ದೆಂಬಂತೆ ತೋರುತ್ತದೆ. ನೀವಿಬ್ಬರೂ ಇದ್ದರೆ ನನಗೂ ಆಕೆಗೂ ಸಮಾಧಾನ ವಿರುವುದು."

"ನಿಮ್ಮನ್ನು ಈ ಪರಿಸ್ಥಿತಿಯಲ್ಲಿ ಬಿಟ್ಟು ನಾವು ಹೋಗುವುದಾದರೂ ಎಂತು ? ನಾವು ಅವಶ್ಯವಾಗಿ ಇರುವೆವು. ನೀವು ಹಾಲನ್ನು ತೆಗೆದುಕೊಳ್ಳ ಬಹುದೆಂದು ಡಾಕ್ಟರರು ಹೇಳಿದರು. ಈಗ ತರಬಹುದೆ ?" ಎಂದು ಪುರುಷೋತ್ತಮರಾಯರು ಎಂದರು.

"ಈಗ ಬೇಡ, ಪೂಜೆಯಾಗಲಿ. ಆಮೇಲೆ ತೆಗೆದುಕೊಳ್ಳುವೆನು. ಬೀರಣ್ಣಾ, ಸಾವಿತ್ರಿ ಮನೆಯಲ್ಲಿ ಒಬ್ಬಳೇ ಆಗುವಳಲ್ಲ ? ಯದುಪತಿ ಊಟ ವಾದ ಬಳಿಕ ನಿನ್ನ ಮನೆಗೆ ಹೋಗಲಿ."

"ಅವಳೂ ಇಲ್ಲಿಯೆ ಬಂದಿರುವಳು, ಗುರುಗಳೆ," ಬೀರಣ್ಣನು ಉತ್ತರವಿತ್ತನು.

"ಹೇಗೋ ? ಒಳಿತಾಯ್ತು. ಏನು, ಶ್ರೀಧರನ ಧ್ವನಿ ಕೇಳಿಸುತ್ತದಲ್ಲ?"

"ಲಕ್ಷ್ಮಿಯೂ ಬಂದಿದ್ದಾಳೆ," ಪುರುಷೋತ್ತಮರಾಯರು ಎಂದರು;

"ಶುಕ್ರವಾರ, ಮನೆ ತುಂಬಿದೆ. ಬಹು ಆನಂದ. ನನ್ನ ವಿಷಯದಲ್ಲಿ ನೀವು ನಿರ್ಭಯರಾಗಿರಿ. ಪರಮಾತ್ಮನು ಕ್ಷೇಮಮಾಡುವನು. ಈಗ ನೀವೂ ಕೈಕಾಲುತೊಳೆದುಕೊಳ್ಳಿರಿ. ನನಗೆ ಆರಾಮವಿದೆ. ನೀವು ಹೋಗಬಹುದು."

"ರಾಯರು ಹೋಗಿ ಬರಲಿ, ಆ ಬಳಿಕ ನಾನು ಹೋಗುವೆನು," ಬೀರಣ್ಣನು ಎಂದನು.

"ಹಾಗೇ ಮಾಡಿರಿ," ಆಚಾರ್ಯರು ಎಂದರು.

ಯದುಪತಿ ಲಕ್ಷ್ಮೀಪೂಜೆಯನ್ನು ಆರಂಭಿಸಿದನು. ಆಚಾರ್ಯರು ಮಲಗಿದಲ್ಲಿಂದ ಲಕ್ಷ್ಯವಿಟ್ಟು ನೋಡುತ್ತಿದ್ದರು. ಯದುಪತಿ ಯಾವ ಕೆಲಸವನ್ನೇ ಮಾಡಲಿ, ಅದರಲ್ಲಿ ಆತನ ಹೃದಯವು ಪೂರ್ಣವಾಗಿ ಇರುತ್ತಿದ್ದಿತು. ಅವನ್ನು ಆತನು ಶಾಂತಚಿತ್ತದಿಂದ ವಿಧಾನಪೂರ್ವಕವಾಗಿ ಮಾಡುತ್ತಿದ್ದನು. ಆದುದರಿಂದ ಅವರಲ್ಲಿ ಅಚ್ಚುಕಟ್ಟುತನವಿರುತ್ತಿತ್ತು, ಸೌಂದರ್ಯವು ಸ್ಫೂರ್ತಿಸುತ್ತಿದ್ದಿತು, ಆದ ಕೆಲಸವು ನಿರ್ದೋಷವಾಗಿ ಆಕರ್ಷಕವಾಗುತ್ತಿದ್ದಿತು, योगस्थः कुरु कर्माणि । ಮತ್ತು योगः कर्मसु कौशलम् । ಎಂಬ ಮಾತುಗಳ ರಹಸ್ಯವನ್ನು ಆಚಾರ್ಯರಿಂದ ನಿತ್ಯವೂ ಅವರ ಆಚರಣೆಯನ್ನು ನೋಡಿ ನೋಡಿ ಆತನು ಅರಿತಿದ್ದನು. ಇಂದು ಆತನು ಮಾಡಿದ ಪೂಜೆಯನ್ನು ಕಂಡು ಆಚಾರ್ಯರು ಮೊದಲಾಗಿ ಎಲ್ಲರೂ ಪ್ರಸನ್ನರಾದರು. ತಮ್ಮ ಪ್ರಸನ್ನತೆಯಲ್ಲಿ ಆಚಾರ್ಯರು ನೋವನ್ನು, ಉಳಿದವರು ಚಿಂತೆಯನ್ನು ಮರೆತರು. ಡಾಕ್ಟರರೂ ತಿರುಗಿ ಬಂದಿದ್ದರು. ಅವರಿಗೆ ಆಗ ಬೇರೆ ಅವಸರದ ಕೆಲಸವು ಇದ್ದಿಲ್ಲವೆಂದೋ ಪೂಜೆಯಿಂದ ಅವರ ಹೃದಯವು ಆಕರ್ಷಿಸಲ್ಪಟ್ಟಿತೆಂಬೋ ಎಲ್ಲರೊಡನೆ ಅವರು ಪೂಜೆ ಮುಗಿವವರೆಗೆ ಕುಳಿತುಬಿಟ್ಟರು. ಸಂಗೀತಸೇವೆಗೆ ಯದುಪತಿಯ ಸಂಗೀತವು ಆರಂಭವಾಯ್ತು. ಇಂದು ತಂಬೂರಿ ಪುರುಷೋತ್ತಮರಾಯರ ಕೈಯಲ್ಲಿ, ಮತ್ತು ಮೃದಂಗವನ್ನು ಬಾರಿಸುವವನು ವಾಡಿಕೆಯಂತೆ ಬೀರಣ್ಣನು. ತಂಬೂರಿಯ ತಂತಿಗಳ ನಾದಮಾಧುರ್ಯವು ಎಲ್ಲರ ಹೃದಯವನ್ನು ಮಧುರವಾಗಿಸಿತು. ಉಕ್ಕಿನ

ತಂತಿಗಳಿಂದ ಇಷ್ಟೊಂದು ಮಾಧುರ್ಯವು ಹೊರಹೊಮ್ಮುವುದಲ್ಲವೆ ? ಒಂದು ಮಾತನ್ನು ಇಲ್ಲಿ ಲಕ್ಷಿಸಬೇಕು. ಆ ತಂತಿಗಳು ಸ್ವೈರವಾಗಿರಲಿಲ್ಲ. ಅವು ಸಂಯಮಿತವಾಗಿದ್ದುವು. ಸಂಯಮವು ! ಸಂಯಮವು ಮಾಧುರ್ಯದ ಉಗಮಸ್ಥಾನವು ! ಯದುಪತಿ ಹಾಡತೊಡಗಿದನು. ಭಾವತನ್ಮಯನಾದ ಆ ಬಾಲಗಾಯಕನ ಸಂಗೀತವನ್ನು ಎಲ್ಲರೂ ಚಿತ್ರದ ಗೊಂಬೆಗಳಂತೆ ತಲ್ಲೀನರಾಗಿ ಕೇಳುತ್ತ ಕುಳಿತರು. ಆ ಹಿಂದೋಲರಾಗದ ಮಹಿಮಾತಿಶಯ ವನ್ನು ವರ್ಣಿಸಲು ಪಾಮರನಾದ ನನಗೆ ಶಕ್ತಿಯಿಲ್ಲ ! ಶ್ರಾವಣಮಾಸದ ಶುಕ್ಲಪಕ್ಷದ ಬೆಳುದಿಂಗಳ ರಾತ್ರಿಯಲ್ಲಿ, ದೇವಾ ಮುರಲೀಧರಾ, ಯಮುನೆಯ ದಂಡೆಯಮೇಲೆ ಉಯ್ಯಾಲೆಯಾಡುವಾಗ ನೀನು ಕೊಳಲೂದುತ್ತ ಹಿಂದೋಲ ರಾಗಕ್ಕೆ ಜನ್ಮವಿತ್ತೆ ! ಶಾಂತಿ ಮಾಂಗಲ್ಯ ಮಾಧುರ್ಯಗಳ ಹೊನಲನ್ನು ಹರಿಯಿಸಿ ನೀನು ವಿಶ್ವದ ಹೃದಯವನ್ನು ಸೆಳೆದು ನಿನ್ನ ಧ್ಯಾನದಲ್ಲಿ ಲೀನವಾಗಿ ಸಿದೆ !

ರಾಗ—ಹಿಂದೋಲ.

ಬೀಸುತಿದೆ ಬಿರುಗಾಳಿ ನಾಲ್ದೆಸೆಗಳಿಂದೆ ।
ಲೇಸನೊದವಿಸು, ತಂದೆ, ನನ್ನ ದೀವಿಗೆಗೆ ॥ ಪಲ್ಲವಿ ॥

ತಳದೊಳೊಂದೆರಡೆ ಹನಿಯೆಣ್ಣೆಯುಳಿದಿದೆ ಹಣತೆ-
ಯೊಳು, ಬತ್ತಿಯದನುಂಡು ಮುಂದಾರಿಗೆ ॥
ಬೆಳಕನಿತ್ತೊಡೆ ಮುಂದೆ ನಡೆವೆನೈ ನಾಲ್ವೆಜ್ಜೆ-
ಗಳನಾದರೂ ನಾನು ನಿನ್ನತ್ತ, ತಂದೇ ! ॥ ೧ ॥

ಬಿರಿಯುತಿಹುದಯ್ಯ ಕತ್ತಲೆ ಬೆಳಕಿನೊಳು ದೀಪ-
ದುರಿಯಿಂತು ಹೊಯ್ದಾಡೆ ಬಿರುಗಾಳಿಗೆ ॥
ಕೊರಕಲಿಗೆ ನನ್ನನೀ ಬೆಳಕುಕತ್ತಲೆಯಾಟ-
ವಿರಿಸದಂತೆಸಗಯ್ಯ ಕರುಣಾಕರಾ ! ॥ ೨ ॥

ಬಿರುಗಾಳಿಗಳ ಹೊಯ್ತಕೆನ್ನ ದೀವಿಗೆ ನಂದ-
ದಿರುವಂತೆ ಗೈವ ಹದನವನು, ದೇವಾ ॥

ಅರುಹು ನೀನೆನಗೆ, ಭೋ ತ್ರಿಜಗದ್ಗುರೋ; ನಿನ್ನ
ನೆರವಿನಿಂದಲ್ತೆ ಮಾಂಗಲ್ಯದೊದವು ? || ೩ ||

ಪೂಜೆ ಮುಗಿಯಿತು ಬೀರಣ್ಣನು ಆಚಾರ್ಯರಿಗೆ ಹಾಲನ್ನು ತಂದುಕೊಟ್ಟನು. ಎಲ್ಲರ ಊಟವಾಯ್ತು. ಆಚಾರ್ಯರ ವಿನಂತಿಯನ್ನು ಮನ್ನಿಸಿ ಡಾಕ್ಟರರೂ ಅಂದು ಅವರಲ್ಲಿಯೆ ಊಟಮಾಡಿದರು.

* * * *

## ೧೦

ಆಚಾರ್ಯರು ಅಂದು ಸಾಯಂಕಾಲ ಕಾಯಿಪಲ್ಲೆಯನ್ನು ತರಲು ಪೇಟೆಗೆ ಹೋಗಿದ್ದರು. ತಿರುಗಿ ಬರುತ್ತಿರುವಾಗ ಅವರು ಹೊನ್ನೂರ ಬಾಬಣ್ಣ ದೇಸಾಯರ ಕುದುರೆಯ ಕಾಲ್ತುಳಿತಕ್ಕೆ ಸಿಕ್ಕಿ ಆಪತ್ತಿಗೆ ಗುರಿಯಾದರು. ಹೊಸಹರೆಯದ ಬಾಬಣ್ಣ ದೇಸಾಯರಿಗೆ ಐಶ್ವರ್ಯದ ಹೆಮ್ಮೆ. ಆಗಾಗ ಅವರು ರಾಮಪುರಕ್ಕೆ ತಮ್ಮ ಐಶ್ವರ್ಯದ ಪ್ರದರ್ಶನಕ್ಕಾಗಿ ಬರುತ್ತಿದ್ದರು. ಬಲ್ಬೆಲೆಯ ಬಟ್ಟೆಗಳನ್ನು ತೊಟ್ಟುಕೊಂಡು ಮತ್ತು ಆಭರಣಗಳನ್ನು ಇಟ್ಟುಕೊಂಡು ದೊಡ್ಡ ಕುದುರೆಯನ್ನೇರಿ ಬರುವುದು ಅವರ ವಾಡಿಕೆ. ಜನವಿಡಿದು ಕಿಕ್ಕಿರಿದಿರುವ ಬೀದಿಗಳಲ್ಲಾದರೂ ಕುದುರೆಯ ಕಡಿವಾಣವನ್ನು ಬಿಗಿಹಿಡಿಯಬಾರದೇ ? ಅಲ್ಲಿಯೂ ಕುದುರೆ ಓಡಬೇಕು, ವೇಗದಿಂದ ಓಡಬೇಕು ! ಹಾಗೆ ಓಡುತ್ತಿರುವ ಕುದುರೆಯನ್ನೂ ಕುದುರೆಯನ್ನೋಡಿಸುತ್ತಿರುವ ತಮ್ಮನ್ನೂ ಜನರು ಕೌತುಕಗೊಂಡು ನೋಡಬೇಕು ಎಂದು ಅವರ ಹೆಬ್ಬಯಕೆ. ಗೊಂದಲದಲ್ಲಿ ಯಾರಾದರೂ ಕುದುರೆಯ ಕಾಲಿಗೆ ಸಿಕ್ಕಿ ನೊಂದರೆ, ತಪ್ಪು ಹಾಗೆ ಸಿಕ್ಕಿ ನೊಂದವರದು ! ಎಚ್ಚರದಿಂದ ಅವರು ಏಕೆ ಹೋಗಬಾರದು ? ಅಡನಾಡಿ ಜನವು ! ಈ ಮೊದಲು ಮೂರುನಾಲ್ಕು ಸಲವಾದರೂ ಹೀಗೆ ಆಗಿದ್ದಿತು. ವಿಚಾರಣೆ ನಡೆಯಿತು. ಆಘಾತಕ್ಕೆ ಗುರಿಯಾದವರದೇ ತಪ್ಪು ಎಂದು ನಿರ್ಣಯವಾಯ್ತು ! ಇದರ ಹಿಂದಿನ ಸಲ ಮಾತ್ರ ದೇಸಾಯರಿಗೆ ಸೌಮ್ಯ ಎಚ್ಚರಿಕೆ ದೊರೆತಿತ್ತು. ಎಚ್ಚರಿಕೆಯ ನೆನಪು ಉಳಿಯದಷ್ಟು ಅದು ಸೌಮ್ಯ

ವಾಗಿತ್ತು. ಹಿಂದಿನ ರೀತಿಯಲ್ಲಿಯೇ ಈ ಸಲವೂ ಅವರು ಕುದುರೆಯನ್ನೋಡಿ ಸುತ್ತ ಬರುತ್ತಿರುವಾಗ ಸಂಗೀತ ಮಾಧವಾಚಾರ್ಯರು ಆಪತ್ತಿಗೆ ಗುರಿಯಾದರು.

ಆಚಾರ್ಯರು ಬಹುಜನಕ್ಕೆ ಬೇಕಾದವರು. ಜನರಲ್ಲಿ ಅವರ ಸಂಗೀತಕ್ಕೆ ಗೌರವವಿದ್ದಿತು, ಅವರ ಗುಣಕ್ಕೆ ಆದರವಿದ್ದಿತು. ಅವರ ಪ್ರೇಮ-ಪೂರ್ಣ ಹೃದಯವು ಮತ್ತು ನಿರ್ಮಲ ಜೀವನವು ಜನರ ಅಂತಃಕರಣವನ್ನು ಆಕರ್ಷಿಸಿದ್ದುವು. ಆದುದರಿಂದ ಅವರಿಗೆ ಆಪತ್ತು ಒದಗಿದ ಸಂಗತಿಯನ್ನು ಕೇಳಿ ಅನೇಕ ಜನರು ಅವರ ಯೋಗಕ್ಷೇಮವನ್ನು ವಿಚಾರಿಸಲು ಬಂದು ಚಿಂತೆಗೆ ಕಾರಣವಿಲ್ಲವೆಂಬುದನ್ನು ತಿಳಿದು ಸಮಾಧಾನಗೊಂಡು ಹೋದರು. ಹೀಗೆ ಮುಂದೆ ಐದಾರು ದಿನ ನಡೆಯಿತು, ಈ ರೀತಿಯಾಗಿ ಬಂದು ಹೋದವರಲ್ಲಿ ನಾಡುಗವುಡ ಸೂರ್ಯಪ್ಪನವರೆಂಬ ಗೃಹಸ್ಥರು ಒಬ್ಬರಾಗಿದ್ದರು.

ಆಚಾರ್ಯರಿಗೆ ಗಂಡಾತರವು ಬಂದುದು ತಮ್ಮ ಮಿತ್ರರಾದ ರಂಗಪ್ಪ ದೇಸಾಯರ ಮಗನ ಅವಿವೇಕದಿಂದೆಂದು ಸೂರ್ಯಪ್ಪನವರಿಗೆ ಬಹು ವ್ಯಥೆಯಾಯ್ತು. “ಬಾಬಣ್ಣನ ಐಶ್ವರ್ಯದ ಮದವು ಇನ್ನೂ ಹೆಚ್ಚುತ್ತಲೇ ಇದೆ. ರಂಗಪ್ಪ ದೇಸಾಯರು ಎಂತಹ ನಿಗರ್ವಿ, ಎಂತಹ ಕರುಣಾಳು! ಅವರ ಗುಣಗಳು ಅವರ ಮಗನಿಗೆ ಏಕೆ ಬರಬಾರದು? ಸೋದರಮಾವನಲ್ಲಿ ಬೆಳೆದುದರಿಂದ ಅವನ ದುರ್ಗುಣಗಳು ಇವನಲ್ಲಿ ಸೇರಿಕೊಂಡಿವೆ. ಎಂತಹ ಜೀವಕ್ಕೆ ಇವನಿಂದ ಗಂಡಾಂತರವು ಘಟಿಸಿತಲ್ಲ! ದೇವನ ದಯೆಯಿಂದ, ನಮ್ಮೆಲ್ಲರ ಸುದೈವದಿಂದ, ಆಚಾರ್ಯರು ಬದುಕಿಕೊಂಡರು. ಬಾಬಣ್ಣನಿಗೆ ಬುದ್ಧಿ ಬರುವಂತೆ ಮಾಡಬೇಕು. ಇವನ ತಂದೆಯ ವಿಶ್ವಾಸದ ಮಿತ್ರನಾಗಿದ್ದ ನಾನು ಇನ್ನು ಸುಮ್ಮನಿರುವುದು ಮಹಾಪರಾಧವು. ಈಹೊತ್ತೇ ಹೊನ್ನೂರಿಗೆ ಹೋಗುವೆನು!” ಎಂದು ಸೂರ್ಯಪ್ಪನವರು ಸಿದ್ಧತೆಯನ್ನು ಮಾಡಿಕೊಂಡು ಹೊರಟೇ ಬಿಟ್ಟರು.

ಬಾಬಣ್ಣದೇಸಾಯರು ಹಿರಿಯರಿಗೆ ಹೆದರುತ್ತಿದ್ದರು. ಅದರಲ್ಲಿಯೂ ತಮ್ಮ ತಂದೆಯ ಪರಮ ಮಿತ್ರರಾದ ಸೂರ್ಯಪ್ಪನವರ ಹೆದರಿಕೆ ಅವರಿಗೆ ಹೆಚ್ಚಾಗಿದ್ದಿತು. ಇದಲ್ಲದೆ ಅವರ ವಿಷಯದಲ್ಲಿ ಆದರವೂ ಇದ್ದಿತು.

ಸೂರ್ಯಪ್ಪನವರು ಹೊನ್ನೂರಿಗೆ ಬಂದಾಗ ಬಾಬಣ್ಣದೇಸಾಯರು ಆದೇ ಊಟಮಾಡಿ ಕುಳಿತಿದ್ದರು. ಸೂರ್ಯಪ್ಪನವರು ಆಕಸ್ಮಾತ್ತಾಗಿ ಬಂದುದನ್ನು ಕಂಡೊಡನೆ, "ಏಕೆ ಇವರು ಹೀಗೆ ಬಿಸಿಲಲ್ಲಿ ಬಂದಿರಬಹುದು ?" ಎಂದು ಯೋಚಿಸುತ್ತ ಎದ್ದು ಹೋಗಿ ಅವರನ್ನು ಕರೆತಂದು ಕುಳ್ಳಿರಿಸಿದರು. ಸೂರ್ಯಪ್ಪನವರು ನೇರವಾಗಿ ಆಚಾರ್ಯರ ಮಾತನ್ನೆತ್ತಿದರು. ಆಚಾರ್ಯ ರಂತಹ ಲೋಕಪ್ರಿಯರಾದ ಸಾಧುಪುರುಷರ ಮತ್ತು ಕಲಾಸೇವಕರಮೇಲೆ ಕುದುರೆಯನ್ನು ಹಾಯಿಸಿ ಎಂತಹ ಪ್ರಮಾದವನ್ನು ಮಾಡಿದರೆಂಬುದನ್ನು ಅವರು ದೇಸಾಯರಿಗೆ ಸ್ಪಷ್ಟಗೊಳಿಸಿದರು. ದೇಸಾಯರಿಗೆ ಸ್ವಲ್ಪ ಅರಿವು ಉಂಟಾಯ್ತು. ಮಹಾಪರಾಧವು ತಮ್ಮಿಂದ ಘಟಿಸಿತೆಂದು ಅವರ ಹೃದಯಕ್ಕೆ ಒಂದು ಬಗೆಯ ಆಘಾತವೂ ಆಯ್ತು. "ಆದುದಕ್ಕಿಂತ ಹೆಚ್ಚಿನ ದುರ್ಘಟನೆ ಆಗಲಿಲ್ಲ. ಹಿರಿಯರ ಪುಣ್ಯವು ನನ್ನನ್ನು ಕಾಯ್ದಿತು," ಎಂದು ಅವರು ಮನಸ್ಸಿನಲ್ಲಿ ಎಂದರು. ಆದರೆ ತಪ್ಪೊಪ್ಪಿಕೊಳ್ಳಲು ಅವರಿಗೆ ಮನಸ್ಸಾಗದು. ಅಭಿಮಾನವು ಅಡ್ಡಬರುತ್ತಿತ್ತು. ಅಭಿಮಾನವು–ದುರಭಿಮಾನವು– ಅಸುರೀ ಸಂಪತ್ತು ಮಾನವನ ಪ್ರಗತಿಗೆ ಅದೊಂದು ಮಹಾವಿಘ್ನವು. ಮಾನವನ ಸ್ವಾಭಾವಿಕ ಪ್ರವೃತ್ತಿ ಮುಂದೆ ಹೋಗಬೇಕೆಂಬುದು. ಆದರೆ ಅಭಿಮಾನವು ಅಜಗರದಂತೆ ಅಡ್ಡಬಿದ್ದಿರುವವರೆಗೆ ಮುಂದಿನ ಗತಿ ಕುಂಠಿತವಾಗಿಯೆ ಉಳಿವುದು. ದೇಸಾಯರು ಎಂದರು, "ಕಾಕಾ, ಆಚಾರ್ಯರು ಸ್ವಲ್ಪ ಬದಿಗೆ ಸರಿದಿದ್ದರೆ ಅನರ್ಥವು ತಪ್ಪುತ್ತಿತ್ತಲ್ಲ ?"

ಸೂರ್ಯಪ್ಪನವರು ಗಂಭೀರವಾಗಿ ಬಾಬಣ್ಣನ ಕಡೆಗೆ ನೋಡುತ್ತ ಎಂದರು, "ಬಾಬಣ್ಣಾ, ಎಲ್ಲಿ ಇಟ್ಟಿರುವೆ ಬುದ್ಧಿಯನ್ನು ? ಮಾಡಿದ ತಪ್ಪನ್ನು ಒಪ್ಪಿಕೊಳ್ಳಲೊಲ್ಲದ ದುರಭಿಮಾನಿ ನೀನು; ಒಪ್ಪಿಕೊಳ್ಳಲು ಧೈರ್ಯ ವಿಲ್ಲದ ಹೇಡಿ ನೀನು ! ಜನಸಂದಣಿಯಲ್ಲಿ ತಾವೇರಿದ ಕುದುರೆಯನ್ನು ಸ್ವೈರವಾಗಿ ಓಡಿಸುತ್ತ ಹೋಗಲು ಐಶ್ವರ್ಯವಂತರು ಅಧಿಕಾರವನ್ನು ಪಡೆದು ಬಂದಿರುವರಲ್ಲವೆ ? ಏನಾಯ್ತು ಗೊತ್ತಿದೆಯೆ ನಿನಗೆ ? ಅಥವಾ ತಮ್ಮ ದುರ್ವರ್ತನದಿಂದ ಏನಾಯ್ತೆಂಬುದನ್ನು ತಿಳಿದುಕೊಳ್ಳಲು ಐಶ್ವರ್ಯವಂತರು ಏಕೆ ಶ್ರಮಿಸಬೇಕೆಂದೆನ್ನುವೆಯಾ ? ವೇಗದಿಂದ ಓಡುತ್ತಿರುವ ಕುದುರೆಯ ಕಾಲಿಗೆ ಸಿಕ್ಕಿ ಎಲ್ಲಿ ಸಾಯುವೆವೊ ಎಂಬ ಭಯದಿಂದ ಜನರು ದಿಕ್ಕುಗೆಟ್ಟು

ಓಡುತ್ತಿರುವಾಗ ಆಚಾರ್ಯರು ಆ ನುಗ್ಗಾಟದಲ್ಲಿ ಸಿಕ್ಕಿ ಕೆಳಗೆ ಬಿದ್ದರು. ದಿಕ್ಕುಗೆಟ್ಟು ಓಡುತ್ತಿರುವವರಿಗೆ ಕಾಲಲ್ಲಿ ಏನಿದೆಂಬುದರ ಅರಿವು ಎಲ್ಲಿ ? ಅವರು ಆಚಾರ್ಯರನ್ನು ತುಳಿಯುತ್ತ ಹೋದರು. ಮೇಲೆ ಏಳಲು, ಅಷ್ಟೇ ಅಲ್ಲ, ಅತ್ತಿತ್ತ ಸರಿಯಲು ಅವರಿಗೆ ಅವಕಾಶವೇ ಇರಲಿಲ್ಲ. ಅಷ್ಟರಲ್ಲಿ ನಿನ್ನ ಕುದುರೆ ಅವರನ್ನು ತುಳಿಯಿತು. ಅವರ ತಲೆಯ ಹಿಮ್ಮಗ್ಗುಲಿಗೆ ಕುದುರೆಯ ಖುರದ ಬಲವಾದ ಪೆಟ್ಟು ತಗಲಿದೆ ನೀನು ಎನ್ನುವೆ, 'ಆಚಾರ್ಯರು ಸ್ವಲ್ಪ ಬದಿಗೆ ಸರಿದಿದ್ದರೆ ಅನರ್ಥವು ತಪ್ಪುತ್ತಿತ್ತಲ್ಲ ?' ಎಂದು ಹೇಗಾದರೂ ಬದಿಗೆ ಸರಿದು ಸ್ವೈರವಾಗಿ ಓಡುವ ನಿನ್ನ ಕುದುರೆಗೆ ದಾರಿಮಾಡಿಕೊಡುವುದು ಅವರ ಕರ್ತವ್ಯವಿತ್ತಲ್ಲವೆ ? ನೀನು ಸಿರಿವಂತನಯ್ಯಾ ! ನಿನಗೆ ಕರ್ತವ್ಯವಿಲ್ಲ ! ನಿನ್ನ ಕಾರುಣ್ಯಶೀಲರಾದ ತಂದೆ ಎಲ್ಲಿ, ಕರುಣಾವಿಮುಖನಾದ ನೀನೆಲ್ಲಿ ? ನನ್ನ ಮಿತ್ರನ ಹೆಸರಿಗೆ ಕಲಂಕವನ್ನು ತಂದೆ ನೀನು !" ಹೀಗೆಂದು ಅವರು ತಮ್ಮೊಡನೆ ತಂದ ಒಂದು ಚಿಕ್ಕ ಚೀಲದೊಳಗಿಂದ ಒಂದು ಭಾವಚಿತ್ರವನ್ನು ಹೊರಗೆ ತೆಗೆದು ಬಾಬಣ್ಣನ ಕೈಗೆ ಕೊಟ್ಟು, "ಬಾಬಣ್ಣಾ, ಈ ಚಿತ್ರದಲ್ಲಿ ಇರುವವರನ್ನು ಗುರುತಿಸುವೆಯಾ ? ನಡುವೆ ಕುಳಿತವರು ಎಡಬಲದಲ್ಲಿದ್ದ ನನಗೆ ಮತ್ತು ನಿನ್ನ ತಂದೆಗೆ ಪೂಜ್ಯರಾಗಿದ್ದರೆಂದು ತಿಳಿಯಲು ಬರುವುದಲ್ಲವೆ? ಅವರನ್ನೇ ತುಳಿಯಿತು ನಿನ್ನ ಕುದುರೆ !"

ಬಾಬಣ್ಣದೇಸಾಯರ ಕಣ್ಣುಗಳಿಂದ ನೀರು ಹರಿಯತೊಡಗಿತು. ಸ್ವಲ್ಪ ಹೊತ್ತಾದ ಬಳಿಕ ಅವರು ಎಂದರು, "ಕಾಕಾ, ತಪ್ಪಾಯ್ತು ! ನಿಮ್ಮ ಪಾದಗಳ ಆಣೆ, ಇನ್ನು ಮುಂದೆ ಇಂತಹ ಅವಿವೇಕವನ್ನು ನಾನು ಮಾಡುವುದಿಲ್ಲ. ಆಚಾರ್ಯರ ಪಾದಗಳ ಮೇಲೆ ನನ್ನನ್ನು ಹಾಕಿರಿ, ನಾನು ಅವರ ಕ್ಷಮೆಯನ್ನು ಬೇಡಿಕೊಳ್ಳುವೆನು. ತಂದೆಯವರ ಜೀವನವನ್ನು ನನ್ನ ಕಣ್ಣ ಮುಂದೆ ಇಟ್ಟುಕೊಂಡು ನನ್ನ ಜೀವನವನ್ನು ಪವಿತ್ರವಾಗಿಸಲು ಪ್ರಯತ್ನಿಸುವೆನು. ಕಾಕಾ, ಸನ್ಮಾರ್ಗದಲ್ಲಿ ನೀವು ನನಗೆ ಸಹಾಯಕರಾಗಿರಿ. ಈಗಲೆ ನೀವು ಬಂದಿದ್ದೀರಿ ಕೈಕಾಲುಗಳನ್ನು ತೊಳೆದುಕೊಳ್ಳಿರಿ. ನೀವು ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊಂಡ ಬಳಿಕ ರಾಮಪುರಕ್ಕೆ ಹೊರಡುವ."

ಮುಂದೆ ಎರಡು ಗಂಟೆಗಳ ತರುವಾಯ ನಾಡುಗವುಡ ಸೂರ್ಯಪ್ಪನವರೊಡನೆ ಬಾಬಣ್ಣದೇಸಾಯರು ರಾಮಪುರಕ್ಕೆ ಹೊರಟರು.

ಮರುದಿನ ಪ್ರಾತಃಕಾಲದಲ್ಲಿ ಆಚಾರ್ಯರು ತಮ್ಮ ಮಂಚದ ಬಳಿಯಲ್ಲಿ ಕುರ್ಚಿಯ ಮೇಲೆ ಎದ್ದು ಕುಳಿತಿದ್ದರು. ಭಟ್ಟರೂ ಯದುಪತಿಯೂ ಅವರ ಸೇವೆಯಲ್ಲಿ ತೊಡಗಿದ್ದರು. ಆಚಾರ್ಯರ ಹಾಸಿಗೆಯಲ್ಲಿಯ ಕಂಬಳಿ, ಹಚ್ಚಡ ಮೊದಲಾದುವನ್ನು ಯದುಪತಿ ಹೊರಗೆ ಒಯ್ದು ಕೊಡವಿ ತಂದಿಟ್ಟನು. ಬಳಿಕ ಭಟ್ಟರೂ ಆತನೂ ಕೂಡಿ ಸರಿಯಾಗಿ ಹಾಸಿಗೆಯನ್ನು ಹಾಸಿದರು. ತರುವಾಯ ಯದುಪತಿ ಬಿಸಿನೀರನ್ನೂ ಕಬ್ಬಿಣ ಬುಟ್ಟಿಯನ್ನೂ ಕರಿಬೂದಿಯನ್ನೂ ತಂದಿಟ್ಟನು. ಆಚಾರ್ಯರು ಹಲ್ಲುಗಳನ್ನು ಉಜ್ಜಿಕೊಂಡು ಕೈಕಾಲುಮುಖಗಳನ್ನು ತೊಳೆದುಕೊಂಡು ಯದುಪತಿ ಕೊಟ್ಟ ಬಟ್ಟೆಯಿಂದ ಒರಸಿಕೊಂಡರು. ಬಳಿಕ ಅವರು ಮೈಮೇಲಿನ ಹಿಂದಿನ ದಿನದ ಬಟ್ಟೆಗಳನ್ನು ಒಂದೊಂದಾಗಿ ತೆಗೆದು ಯದುಪತಿ ಸಿದ್ಧಮಾಡಿಕೊಟ್ಟ ಮಡಿ ಬಟ್ಟೆಗಳನ್ನು ತೊಟ್ಟುಕೊಂಡರು. ಅನಂತರ ಶಾಂತ ಚಿತ್ತದಿಂದ ಪರಮೇಶ್ವರನನ್ನು ಧ್ಯಾನಿಸಿ ಔಷಧವನ್ನು ತೆಗೆದುಕೊಂಡು ಹಾಸಿಗೆಯಲ್ಲಿ ಮಲಗಿದರು. ಇಂದು ಅವರ ನೋವು ನಿನ್ನೆಗಿಂತ ಕಡಿಮೆಯಿದ್ದರೂ ಅಸ್ವಸ್ಥವಾಗಿಸುವಷ್ಟು ಇನ್ನೂ ಇದ್ದಿತು. ಆದರೆ ಆಚಾರ್ಯರು ನೋವಿಗೆ ವಶರಾಗಿ ಸ್ಥೈರ್ಯವನ್ನು ಕಳೆದುಕೊಂಡು ನರಳುತ್ತಿರಲಿಲ್ಲ. ಬಂದುದೆಲ್ಲವೂ ಪರಮಾತ್ಮನ ಸತ್ಸಂಕಲ್ಪದಿಂದೆಂದು ದೃಢವಾಗಿ ನಂಬಿದ ಅವರ ಮುಖದಲ್ಲಿ ಒಂದಾದರೂ ನೋವಿನ ಚಿಹ್ನೆ ತೋರಲಿಲ್ಲ. ಶಾಂತಿ ಕಂಗೊಳಿಸುತ್ತಿದ್ದಿತು. ಭಟ್ಟರ ಆಗಮನವೂ ಅವರ ಸಮಾಧಾನವನ್ನು ಹೆಚ್ಚಿಸಿದ್ದಿತು. ಯದುಪತಿಯ ವಿಷಯದಲ್ಲಿ ಸಣ್ಣಪುಟ್ಟ ಮಾತುಗಳಲ್ಲಿಯೂ ಭಟ್ಟರು ಸ್ವಾಭಾವಿಕವಾಗಿ ವ್ಯಕ್ತಗೊಳಿಸುತ್ತಿರುವ ಪ್ರೇಮವನ್ನು ಕಂಡು, "ಏನು ಪ್ರೇಮವಿದು! ಇವರ ಪ್ರೇಮದ ಮುಂದೆ ನನ್ನ ಪ್ರೇಮವು ಏತರದು? ನಿಃಸ್ವಾರ್ಥಪ್ರೇಮವು ಎಷ್ಟು ಮಧುರವಾಗಿರುತ್ತದೆ! ಎಷ್ಟು ಪಾವನವಾಗಿರುತ್ತದೆ!" ಎಂದು ಮನಸ್ಸಿನಲ್ಲಿ ಅವರು ಆಗಾಗ ಎಂದರು. ಭಟ್ಟರ ವಿಷಯದಲ್ಲಿ ಯದುಪತಿಗಿರುವ ಆದರವೂ ಆಚಾರ್ಯರನ್ನು ಮೆಚ್ಚಿಸಿತು. ಈ ಪ್ರೇಮಾದರಗಳ ಮಧುರ ಸಮ್ಮೇಲನವು ಅವರಿಗೆ ಇಂದು ಒಂದು ಔಷಧವೇ ಆಗಿದ್ದಿತು.

ಭಟ್ಟರು ಆಚಾರ್ಯರೊಡನೆ ಮಾತನಾಡುತ್ತ ಕುಳಿತರು. ಮುಂಜಾವಿನಲ್ಲೆಲ್ಲ ಯದುಪತಿ ಆಚಾರ್ಯರ ಸೇವೆಗೆಂದು ಅವರ ಬಳಿಯಲ್ಲಿಯೆ ಇರುತ್ತಿ

ದ್ದನು. ಆಚಾರ್ಯರಿಗೆ ಇಂದು ನೋವು ಕಡಿಮೆಯಿದ್ದುದರಿಂದ ಅ
ಎದ್ದು ದಿಂಬಿಗೆ ಒರಗಿಕೊಂಡು ಕುಳಿತರು. ಮಾತನಾಡುತ್ತ ಭಟ್ಟ
ಎಂದರು :—

" ಆಚಾರ್ಯರೆ, ಎಂತಹ ಪೆಟ್ಟು ಬಿದ್ದಿದೆ ನಿಮ್ಮ ಹಿಂದಲೆ
ಕುದುರೆಯ ಖುರದ ಪೆಟ್ಟು ಅಲ್ಲವೆ ? ತುಂಬಿದ ಬೀದಿಯಲ್ಲಿ ಹೀಗೆ ಕು
ಯನ್ನು ಓಡಿಸಬಾರದೆಂಬುದನ್ನು ಆ ದೇಸಾಯಿ ತಿಳಿಯಬಾರದೆ ? ಆ
ಸಂದಣಿ ಅವನ ಕಣ್ಣಿಗೆ ಕಾಣಿಸಬಾರದೆ ? ಬುದ್ಧಿ ಮಣ್ಣು ಮುಕ್ಕುತ್ತಿರುವ
ಕಣ್ಣಿಗೆ ಕಾಣುವ ಶಕ್ತಿ ಎಲ್ಲಿಂದ ? ನಿಮ್ಮ ಮೇಲೆ ಯದುಪತಿಯ ಭಾರವ
ಹೊರಿಸಿ ನಿಮ್ಮನ್ನು ಹೀಗೆ ಆಪತ್ತಿಗೆ ಗುರಿಮಾಡಬೇಕೆ ಪರಮೇಶ್ವರನು ! ಆ
ಬುದ್ಧಿಗೂ ಮಂಕು ! ಏನೋ ಏನೊ ! ಅಯ್ಯೊ, ನನ್ನ ಧೈರ್ಯವೆಂತಹ
ನೋಡಿರಿ, ಆಚಾರ್ಯರೆ ! ಪರಮೇಶ್ವರನ ಲೆಕ್ಕದಲ್ಲಿ ತಪ್ಪುನೋಡ
ಹೊರಟಿರುವೆನು ನಾನು ! ಆತನ ಲೆಕ್ಕದಲ್ಲಿಯ ಅಂಕೆಗಳನ್ನು ನಾನು ಬಲ್ಲೆ
ಅಂಕೆಯರಿಯದ ಮಂಕನು ನಾನು !"

" ಭಟ್ಟರೆ, ಪರಮೇಶ್ವರನ ಲೆಕ್ಕದಲ್ಲಿಯ ಅಂಕೆಗಳನ್ನು ಅ
ಸಾಮರ್ಥ್ಯವು ಯಾರಿಗೆ ? ಆದರೆ ಒಂದು ಮಾತು ನಿಜವು; ನಾವೆಲ್ಲ
ಆತನ ಲೆಕ್ಕದಲ್ಲಿಯ ಅಂಕೆಗಳು. ಆದರೆ ನಮ್ಮ ಬೆಲೆ ನಮಗೇ ಗೊತ್ತಿ
ಅಂಕೆಯ ಬೆಲೆಯೂ ಹೆಚ್ಚುಕಡಿಮೆಯಾಗುವುದುಂಟು. ಈಗ ಹತ್ತು (
ಆಗಿರುವ ಅಂಕೆಗೆ ಎರಡು (೨) ಕೂಡಿದರೆ ಅದು ಹನ್ನೆರಡು (೧೨) ಆಗುವ
ಈ ಹತ್ತರೊಳಗಿಂದ ಎರಡನ್ನು ಕಳೆದರೆ ಅದು ಎಂಟಾಗುವುದು;
ಹತ್ತಕ್ಕೆ ಎರಡರಿಂದ ಗುಣಿಸಿದರೆ ಅದು ಇಪ್ಪತ್ತಾಗುವುದು; ಮತ್ತು ಎರಡ
ಭಾಗಿಸಿದರೆ ಅದು ಐದಾಗುವುದು. ಯಾವಯಾವ ಅಂಕೆ ಯಾವಯ
ಅಂಕೆಯೊಡನೆ ಯಾವಯಾವ ಸಂಬಂಧದಲ್ಲಿ ಬರುವುದೊ ಹಾಗೆ
ಪರಿಣಾಮವಾಗುವುದು. ನಾವು ಅಂಕೆಗಳು ಮಾತ್ರ; ಲೆಕ್ಕಮಾಡುವ
ಪರಮೇಶ್ವರನು. ಆತನ ಲೆಕ್ಕದಲ್ಲಿ ತಪ್ಪು ಉಂಟಾಗದು. ನಾವು
ಯಾವ ಅಂಕೆಯೆ ಆಗಿರಲಿ, ವಿವೇಕದಿಂದ ನಾವು ವರ್ತಿಸುತ್ತಿದ್ದರೆ ನಮ್ಮ
ಏರುವುದೆಂಬುದರಲ್ಲಿ ಸಂದೇಹವಿಲ್ಲ. ಬಾಬಣ್ಣ ದೇಸಾಯಿ ನನ್ನ ವ

ಕುದುರೆಯನ್ನು ಹಾಯಿಸಿದನೆಂದು ಕ್ರೋಧವಶನಾಗಿ ನಾನು ಅವನ ವಿಷಯದಲ್ಲಿ ದ್ವೇಷವನ್ನು ತಳೆದರೆ ನನ್ನ ಮಾನವತೆ ಅಷ್ಟು ನಷ್ಟವಾಗಿ ನನ್ನ ಬೆಲೆ ಇಳಿವುದು. ಅವನೂ ನನ್ನವನು ಎಂದು ಬಂಧುಭಾವವನ್ನು ತಳೆದರೆ ನನ್ನ ಮಾನವತೆ ಮತ್ತಷ್ಟು ವಿಕಾಸಗೊಂಡು ನನ್ನ ಬೆಲೆ ಹೆಚ್ಚುವುದು. ಭಟ್ಟರೆ, ತಪ್ಪನ್ನು ಯಾರು ಮಾಡುವುದಿಲ್ಲ ? ಎಲ್ಲರೂ ಮಾಡುವರು. ತಿಳಿದು ಮಾಡುವರು, ತಿಳಿಯದೆ ಮಾಡುವರು. ತಪ್ಪುಮಾಡಿದವರನ್ನು ಬಂಧುಭಾವದಿಂದ ಕ್ಷಮಿಸಿದರೆ ಆ ಬಂಧುಭಾವವು ವೃದ್ಧಿಗೊಂಡು ಕ್ಷಮಿಸಿದವನ ಮಾನವತೆ ಹೆಚ್ಚುವುದು, ಕ್ಷಮೆದೊರೆತವನ ಮಾನವತೆ ಜಾಗೃತವಾಗಲು ಅನುವಾಗುವುದು. ಭಟ್ಟರೆ, ಮನುಷ್ಯನ ಮಾನವತೆ ಬೆಳೆಯಬೇಕು, ಅಲ್ಲವೆ ?''

'' ಅಹುದು, ಆಚಾರ್ಯರೆ, ನೀವು ಎಂದುದು ಸರ್ವಥಾ ಸತ್ಯವು. ಅಂದು ಈ ಮಗು—''

ಯಾರೋ ಬಂದಂತಾಯ್ತು. ಯದುಪತಿ ಎದ್ದು ಹೋಗಿ ನೋಡಿದನು. ನಾಡುಗವುಡ ಸೂರ್ಯಪ್ಪನವರು ಇನ್ನೊಬ್ಬರೊಡನೆ ಬಂದುದನ್ನು ಅತನು ಆಚಾರ್ಯರಿಗೆ ತಿಳಿಸಿ ಅವರನ್ನು ಒಳಗೆ ಕರೆತಂದನು. ಆಚಾರ್ಯರು ಅವರಿಗೆ ಕುಳಿತುಕೊಳ್ಳಲು ಹೇಳಿ ಸೂರ್ಯಪ್ಪನವರಿಗೆ ಎಂದರು:— '' ಸೂರ್ಯಪ್ಪನವರೆ, ಇವರು ನನ್ನ ಮಿತ್ರರು ಗುರುಭಟ್ಟರು. ಸೊನ್ನೆಗುಂದವು ಇವರ ಊರು. ನನಗೆ ನೋವಾದ ಸುದ್ದಿಯನ್ನು ಕೇಳಿ ನೋಡಲೆಂದು ನಿನ್ನೆ ರಾತ್ರಿ ಬಂದರು. ಇಂದು ನೋವು ಕಡಿಮೆ ಇದೆ. ಗಾಯಗಳು ಮಾಯುತ್ತಲಿವೆ, ತಲೆಯ ಗಾಯವು ತೀವ್ರವಾಗಿರುವುದರಿಂದ ಸ್ವಲ್ಪ ತೊಂದರೆಕೊಡುತ್ತಿದೆ. ಆದಾದರೂ ಮಾಯುತ್ತಲಿದೆ. ಸ್ವಲ್ಪ ನಿಧಾನ ಮಾತ್ರ. ಭಯಕ್ಕೆ ಎಳ್ಳಷ್ಟೂ ಅವಕಾಶವಿಲ್ಲ. ಪರಮೇಶ್ವರನ ಕೃಪೆಯಿಂದ ಎಲ್ಲವೂ ಕ್ಷೇಮವಾಗುವುದು. ಬಾಬಣ್ಣನು ಭೆಟ್ಟಿಯಾದರೆ ಅವನಿಗೆ ತಿಳಿಸಿರಿ. ಅವನು ಸಮಾಧಾನದಿಂದಿರಲಿ.—''

'' ನಾನೇ ಆ ಬಾಬಣ್ಣನು, ತಮಗೆ ಆಪತ್ತನ್ನು ಒದಗಿಸಿದ ಪಾಪಿ !'' ದೇಸಾಯರ ಕಣ್ಣುಗಳಲ್ಲಿ ನೀರು ತುಳುಕುತ್ತಿದ್ದಿತು. ಅವರು ಆಚಾರ್ಯರ ಪಾದಗಳ ಮೇಲೆ ಹಣೆಯಿಟ್ಟರು.

ಆಚಾರ್ಯರು ದೇಸಾಯರ ತಲೆಬೆನ್ನುಗಳ ಮೇಲೆ ಕೈಯಿಳಿದು ಎಂದರು, "ಏಳು, ಬಾಬಣ್ಣಾ; ನನಗೆ ಕ್ಷೇಮವಿದೆ, ಬಂದ ಆಪತ್ತು ನೀಗಿದೆ. ನೀನು ರಂಗಪ್ಪ ದೇಸಾಯರ ಮಗನು, ಬಾಬಣ್ಣಾ. ಹೀಗೆ ಅಯೋಗ್ಯವಾಗಿ ಆಚರಿಸಬೇಕೆ? ಒಳ್ಳೆಯ ತಂದೆಯ ಮಗನು ಒಳ್ಳೆಯವನಾಗಿರಬೇಕಯ್ಯಾ. ನಿನ್ನ ತಂದೆ ಪುಣ್ಯಾತ್ಮರು. ಅವರ ಹೆಸರು ಸಜ್ಜನರ ನಾಲಗೆಗೆ ಸುಧೆಯಾಗಿರುತ್ತದೆ. ಅವರನ್ನು ನೆನೆವ ಮನವು ಪವಿತ್ರಭಾವನೆಗಳಿಂದ ತುಂಬುತ್ತದೆ. ಅವರು ಎಷ್ಟು ನಿರ್ಮಲರು, ಎಷ್ಟು ದಯಾದಾಕ್ಷಿಣ್ಯವಂತರು ಎಂಬುದನ್ನು ನಿನ್ನ ಊರಲ್ಲಿಯ ಹಿರಿಯರನ್ನು ಕೇಳಿ ತಿಳಿದುಕೊಳ್ಳು, ಬಾಬಣ್ಣಾ, ಅವರ ಮುಖದ ಮೇಲಿನ ಸಾತ್ತ್ವಿಕ ತೇಜವನ್ನು ಕಂಡರೆ ಕಣ್ಣಿಗೆ ಆನಂದವು, ಅವರ ಪಾವನ ಸಹವಾಸದ ಭಾಗ್ಯವು ಲಭಿಸಿದರೆ ಆತ್ಮಕ್ಕೆ ಆನಂದವು. ಪುಣ್ಯವಂತರಾಗಿದ್ದರು ಅವರು. ನೀನೂ ಪುಣ್ಯವಂತನಾಗು. ಐಶ್ವರ್ಯದ ಉಬ್ಬಿನಲ್ಲಿ ಮೆರೆಯುತ್ತಿರುವ ನಿನ್ನನ್ನು ಕಂಡು ಯಾರಿಗೆ ಸಂತೋಷವಾಗುವುದಯ್ಯಾ? ಜನರ ಮನಸ್ಸಿನಲ್ಲಿ ನೀನು ತಿರಸ್ಕಾರವನ್ನು ಹುಟ್ಟಿಸುತ್ತಿರುವೆ, ಅಸೂಯೆಯನ್ನು ಹುಟ್ಟಿಸುತ್ತಿರುವೆ, ಕೋಪವನ್ನೂ ಹುಟ್ಟಿಸುತ್ತಿರುವೆ. ನಿನ್ನ ವರ್ತನದಿಂದ ಜನರು ದುಃಖಕ್ಕೆ ಗುರಿಯಾಗುತ್ತಿರುವರು. ಇದು ಮಾನವಜೀವನವಲ್ಲ, ಇದು ರಾಕ್ಷಸಜೀವನವು! ಆತ್ಮಪ್ರೌಢಿಮೆಯನ್ನು ಹೆಚ್ಚಿಸಲು ಉಪಯುಕ್ತವಾಗುವ ಬುದ್ಧಿಯೆ ಇರಲಿ, ಅಧಿಕಾರವೆ ಇರಲಿ, ಐಶ್ವರ್ಯವೇ ಇರಲಿ, ಅದು ಮನುಷ್ಯನನ್ನು ಅಧೋಗತಿಗೆ ಎಳೆವುದು. ಎಚ್ಚರಿಕೆ, ಬಾಬಣ್ಣಾ! ನೀನು ಪುಣ್ಯಶೀಲನ ಮಗನು. ಇನ್ನು ಮುಂದೆ ನೀನು ನಿನ್ನ ತಂದೆಯಂತೆ ಪುಣ್ಯಮಾರ್ಗದಲ್ಲಿ ನಡೆಯಲು ಯತ್ನಿಸುವೆಯೆಂದು ನಾನು ನಂಬಲಾ? ಮಗನೆ, ನಿನ್ನ ಚರಿತ್ರವೂ ಉದಾರವಾಗಲಿ! ಮನುಷ್ಯನು ತನ್ನ ಶಕ್ತಿ ಸಾಮರ್ಥ್ಯವನ್ನು-ಗುಣದ, ಧನದ, ಅಧಿಕಾರದ, ಅಥವಾ ಬುದ್ಧಿಯ ಶಕ್ತಿ ಸಾಮರ್ಥ್ಯವನ್ನು-ದೀನರ, ದುಃಖಿತರ ಮತ್ತು ಅಭಾವಗ್ರಸ್ತರ ಪರಿಪಾಲನಕ್ಕಾಗಿ ಉಪಯೋಗಿಸಿದರೆ ಮಾತ್ರ ಅವನ ಜೀವನವು ಸಾರ್ಥಕವಾಗುವುದು. ಭಗವಾನ್ ಶ್ರೀ ಶಂಕರನು ಸಮುದ್ರ–ಮಂಥನದ ಸಮಯದಲ್ಲಿ ಮೇಲೆ ಬಂದ ಹಾಲಾಹಲ ವಿಷವು ತನ್ನ ಜ್ವಾಲೆಗಳಿಂದ ವಿಶ್ವವನ್ನು ಸುಡಲು ಆರಂಭಿಸಿದುದನ್ನು

ಕಂಡು ಆ ವಿಷವನ್ನು ಕುಡಿದು ವಿಶ್ವವನ್ನು ಸಂರಕ್ಷಿಸಿ ಜಗತ್ತಿಗೆ ಸಾಮರ್ಥ್ಯವನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂಬುದನ್ನು ಕಲಿಸಿದನು. ವಿಷವನ್ನು ಕುಡಿಯಲು ಉದ್ಯುಕ್ತನಾದ ಶ್ರೀ ಶಂಕರನು ಪಾರ್ವತೀದೇವಿಗೆ ಹೇಳಿದ ಈ ಶ್ಲೋಕಗಳು, ಬಾಬಣ್ಣಾ, ನಿನ್ನ ತಂದೆಯವರಿಗೆ ಅತ್ಯಂತ ಪ್ರಿಯವಾಗಿದ್ದುವು. ಅವರು ಅವನ್ನು ಭಕ್ತಿಯಿಂದಲೂ ಆದರದಿಂದಲೂ ಆಗಾಗ ಹೇಳುತ್ತಿದ್ದರು. ಅವರಿಗೆ ಆ ಶ್ಲೋಕಗಳು ಮಾರ್ಗದರ್ಶಕವಾಗಿದ್ದುವು. ಅವು ಹೀಗೆ ಇವೆ:—

आसां प्राणपरीप्सूनां विधेयमभयं हि मे
एतावान् हि प्रभोरर्थो यद् दीनपरिपालनम् ॥
प्राणैः स्वैः प्राणिनः पान्ति साधवः क्षणभङ्गुरैः ।
बद्धवैरेषु भूतेषु मोहितेष्वात्ममायया ॥
पुंसः कृपयतो भद्रे सर्वात्मा प्रीयते हरिः ।
प्रीते हरौ भगवति प्रीयेऽहं सचराचरः ॥
तस्मादिदं गरं भुञ्जे प्रजानां स्वस्तिरस्तु मे ॥

(श्रीमद् भा. ८।७।३८-४०)

"ಆಚಾರ್ಯರೆ, ತಮ್ಮ ಪಾದಸಾಕ್ಷಿಯಾಗಿ ಹೇಳುತ್ತೇನೆ, ನನ್ನ ಪೂಜ್ಯರಾದ ತಂದೆಯ ಮಾರ್ಗದಲ್ಲಿ ನಡೆಯಲು ಇನ್ನು ಹಗಲಿರುಳೂ ಯತ್ನಿಸುವೆನು. ತಮ್ಮ ಆಶೀರ್ವಾದವು ನನಗೆ ಬಲಕಾರಿಯಾಗಲಿ. ಕರುಣಾಳುಗಳಾದ ತಾವು ನನ್ನನ್ನು ಕ್ಷಮಿಸಿ ಹರಸಿದಿರಿ. ನಾನು ತಮ್ಮ ಅಧೀನನು. ತಾವು ನನಗೆ ಗುರು. ಕುರುಡನಿಗೆ ಕಣ್ಣುಗಳನ್ನು ಕೊಟ್ಟಿರಿ," ಎಂದು ಬಾಬಣ್ಣದೇಸಾಯರು ಆಚಾರ್ಯರ ಅಡಿಗೆ ಹಣೆಚಾಚಿದರು.

"ಏಳು, ಬಾಬಣ್ಣಾ, ದೇವದೇವನು ನಿನ್ನನ್ನು ಕೈಹಿಡಿದು ನಡೆಯಿಸಲಿ!" ಆಚಾರ್ಯರು ಎಂದರು.

"ಮಿತ್ರಋಣದಿಂದ ನನ್ನನ್ನು ಮುಕ್ತಗೊಳಿಸಿದಿರಿ, ಆಚಾರ್ಯರೇ. ಕೃತಾರ್ಥನಾದೆನು ನಾನು!" ಸೂರ್ಯಪ್ಪನವರು ಎಂದರು.

"ದೇವಾ, ಎಂತಹ ಮಂಗಲಸಮಯದಲ್ಲಿ ನೀನು ನನ್ನನ್ನು ಇಲ್ಲಿಗೆ ತಂದೆ! ಕ್ಷಮಾನಿಧಿಯ ದರ್ಶನವನ್ನು ನೀನು ನನಗೆ ಮಾಡಿಸಿದೆ. ನಾನು ಧನ್ಯನು!" ಭಟ್ಟರು ಎಂದರು.

“ ದೊಡ್ಡವರು ನನ್ನ ಗುರು !” ಎನ್ನುತ್ತ ಯದುಪತಿ ಆಚಾರ್ಯರ ಅಡಿಗಳ ಮೇಲೆ ಹಣೆಯಿಟ್ಟನು.

ಎಲ್ಲರ ಜೀವನದಲ್ಲಿಯೂ ಇಂತಹ ಪಾವನ ಸಮಯಗಳು ಆಗಾಗ ಬರುತ್ತಿರಲಿ !

* * * *

## ೧೧

ಆಚಾರ್ಯರ ಗಾಯಗಳು ಡಾ. ಶ್ಯಾಮರಾಯರ ಆರೈಕೆಯಿಂದ ಒಂದು ತಿಂಗಳಲ್ಲಿ ಮಾಯ್ದುವು. ಆದರೆ ಅವರಿಗೆ ಮೊದಲಿನ ಶಕ್ತಿ ಬರಲು ಮೂರು ತಿಂಗಳುಗಳ ಕಾಲವು ಬೇಕಾಯಿತ್ತು. ಅವರ ಮಿತ್ರರೆಲ್ಲರು ಸದೈವ ಅವರ ಸೇವೆಗೆ ಸಿದ್ಧರಾಗಿರುತ್ತಿದ್ದರು. ಮಿತ್ರರಿಗೆ ಆಚಾರ್ಯರ ಸಂಬಂಧವು, ಸಂಪರ್ಕವು ಹೆಚ್ಚಾಗಿ ಬಂದುದರಿಂದ ಆಚಾರ್ಯರಲ್ಲಿ ಈ ವರೆಗೂ ಅವರು ಕಾಣದಿದ್ದ ಸದ್ಗುಣಗಳನ್ನು ಸ್ಫುಟವಾಗಿ ಕಂಡರು. ಆಚಾರ್ಯರ ಸಹನಗುಣವು, ಮನಃಶಾಂತಿ, ಔದಾರ್ಯವು, ಪ್ರೇಮವು, ಧರ್ಮನಿಷ್ಠೆ, ಈಶಭಕ್ತಿ ಮಿತ್ರರ ಆದರ ಭಾವವನ್ನು ಹೆಚ್ಚಿಸಿದುವು. ಮಿತ್ರರಲ್ಲಿಯೂ ಈ ಗುಣಗಳು ಮನೆಮಾಡಿದುವು. ಬಾಬಣ್ಣ ದೇಸಾಯರ ನವಜೀವನದಲ್ಲಿ ಮಾಧುರ್ಯವೂ ಉತ್ಸಾಹವೂ ಕಂಗೊಳಿಸಿದುವು. ತಾವು ಈಗ ಅನುಭವಿಸುವ ಆನಂದವು ಅವರಿಗೆ ಅನುಪಮವಾಗಿ ತೋರಿತು. ಏನು ಆಶ್ಚರ್ಯವಿದು ? ಸಜ್ಜನರ ಆಪತ್ತೂ ಕ್ಷೇಮಕಾರಿ !

ಯದುಪತಿಯ ಗುರುಭಕ್ತಿ, ಶಾಂತವೃತ್ತಿ, ಬುದ್ಧಿಮತ್ತೆ ಮತ್ತು ಕರ್ತವ್ಯತತ್ಪರತೆ ಗುಣಗ್ರಾಹಿಯಾದ ಡಾ. ಶ್ಯಾಮರಾಯರ ಲಕ್ಷ್ಯವನ್ನು ಆಕರ್ಷಿಸಿದುವು ಆತನ ಸಾವಧಾನತೆ ಅವರನ್ನು ಮೆಚ್ಚಿಸಿತು. ಆಚಾರ್ಯರ ಗಾಯಗಳನ್ನು ತೊಳೆದು ತೈಲವನ್ನು ಹಚ್ಚುವ ಕೆಲಸವನ್ನು ಅವರು ಆತನ ಕೈಯಿಂದ ಮಾಡಿಸುತ್ತಿದ್ದರು. ಎಲ್ಲವನ್ನೂ ಆತನು ಲಕ್ಷ್ಯವಿಟ್ಟು ಮಾಡುತ್ತಿದ್ದನು. ಆತನ ಕೆಲಸದ ಪದ್ಧತಿಯಿಂದ ಸಂತುಷ್ಟರಾದ ಡಾಕ್ಟರರು ಒಮ್ಮೆ ಆಚಾರ್ಯರಿಗೆ ಎಂದರು, “ ಆಚಾರ್ಯರೆ, ನಿಮ್ಮ ಯದುಪತಿಯನ್ನು ಆತನು

ಸಾವಧಾನವಾಗಿ ಶಾಂತರೀತಿಯಿಂದ ಕೆಲಸಮಾಡುತ್ತಿರುವಾಗ ನೋಡಿದಾಗೆಲ್ಲ ನನ್ನ ಮನಸ್ಸಿಗೆ ಒಂದು ಬಗೆಯ ಕೌತುಕವೆನಿಸುತ್ತದೆ. ತಾನು ಮಾಡುವ ಕಾರ್ಯವು ಯಾವುದೇ ಇರಲಿ, ಎಂತಹದೇ ಇರಲಿ, ಅವನ್ನು ನಿರ್ದೋಷ ವಾಗಿ ನೆರವೇರಿಸಬೇಕೆಂಬುದು ಆತನ ಸ್ವಾಭಾವಿಕ ಪ್ರವೃತ್ತಿಯೆ ಆಗಿದೆ. ನನ್ನ ಸೂಚನೆಗಳನ್ನು ಆತನು ಲಕ್ಷ್ಯಪೂರ್ವಕವಾಗಿ ಕೇಳಿಕೊಂಡು, ಅವುಗಳ ಮಹತ್ತ್ವವನ್ನು ಅರಿಯುದ್ದು ಕೆಲಸಮಾಡುವುದರಿಂದ ಆತನು ಮಾಡಿದ ಕೆಲಸ ವೆಲ್ಲವು ನಿರ್ದೋಷವಾಗುವುದು ಮತ್ತು ಸುಂದರವಾಗುವುದು. ನಾನು ಸೂಕ್ಷ್ಮ ವಾಗಿ ಪರೀಕ್ಷಿಸಿದೆನು, ಆತನ ಮನಸ್ಸಿನ ಸಮತೋಲಕ್ಕೆ ಯಾವ ಸಮಯ ದಲ್ಲಿಯೂ ಭಂಗವಿರಲಿಲ್ಲ. ಮನುಷ್ಯನನ್ನು ದೊಡ್ಡವನನ್ನು ಮಾಡುವ ಗುಣ ಗಳಿವು. ಆಚಾರ್ಯರೇ, ಯದುಪತಿ ದೊಡ್ಡವನಾಗುವನು. ''

" ತಮ್ಮಂತಹ ಸಜ್ಜನರ ಆಶೀರ್ವಾದವು ಯದುಪತಿಗೆ ಲಭಿಸಿದುದು ನನಗೆ ಬಹು ಆನಂದದ ಮಾತು. ಡಾಕ್ಟರರೇ, ನಾನು ತಮಗೆ ಋಣಿಯಾಗಿ ರುವೆನು. ''

" ಆಚಾರ್ಯರೇ, ತಮಗೆ ಮತ್ತು ಯದುಪತಿಗೆ ಯಾವ ಸಂಬಂಧ ವೆಂಬುದನ್ನು ನಾನು ತಿಳಿಯಬಹುದೆ ?''

ಆಚಾರ್ಯರು ಯದುಪತಿಯ ಎಲ್ಲ ವೃತ್ತಾಂತವನ್ನು ಹೇಳಿದರು. ಆದರೆ ಆತನ ಸೋದರಮಾವನ ವಿಷಯವನ್ನು ಅವರು ಪೂರ್ಣವಾಗಿ ಬಿಟ್ಟರು.

ಡಾ. ಶ್ಯಾಮರಾಯರು ಗುಣಿಗಳು ಮತ್ತು ಗುಣಗ್ರಾಹಿಗಳು. ಯದುಪತಿಯ ಗುಣಶೀಲಗಳಿಂದ ಈ ಮೊದಲೆ ಸಂತುಷ್ಟರಾದ ಅವರಿಗೆ ಆತನ ವೃತ್ತಾಂತ ವನ್ನು ಕೇಳಿದ ಬಳಿಕ ಮಮತೆಯೆನಿಸಲು ಆರಂಭವಾಯ್ತು. ಅವರು ಎಂದರು, " ಆಚಾರ್ಯರೆ, ವ್ಯಕ್ತಿಗಳಿಗೆ ಆಶ್ರಯವು, ಆಸ್ಪದವು ದೊರೆಯು ದಿದ್ದರೆ ಪರಿಸ್ಥಿತಿಯೊಡನೆ ಕಾದುವುದರಲ್ಲಿಯೆ ಅದರ ಶಕ್ತಿ ವ್ಯಯವಾಗಿ ಅದರ ಜೀವನವು ನಿರರ್ಥವಾಗುವುದು. ಅದಕ್ಕಂತು ಹಾನಿ ಸೈ, ಆದರೆ ಸಮಾಜಕ್ಕೂ ಹಾನಿಯಿಲ್ಲದೆ ಇಲ್ಲ ಆದರೆ ಸ್ವಾರ್ಥಾಂಧ ವ್ಯಕ್ತಿಗಳಾದ ನಮಗೆ ಇಂದು ಸಮಾಜಜೀವನವೇ ಇಲ್ಲದಾಗಿದೆ. ಜನವು ಈಗ ಸಮೂಹವಾಗಿದೆಯಲ್ಲದೆ ಸಮಾಜವಾಗಿಲ್ಲ. ಸಮೂಹದಲ್ಲಿ ಶೈಥಿಲ್ಯವಿರುತ್ತದೆ, ಆದರೆ ಸಮಾಜದಲ್ಲಿ ಸಂಘಟ್ಟನೆ ಇರುತ್ತದೆ. ಸಮೂಹದಲ್ಲಿ ಪರಕೀಯತೆ—ಎಂದರೆ ತಾನು

ಇನ್ನೊಬ್ಬನಿಗೆ ಏನೂ ಅಲ್ಲ, ಇನ್ನೊಬ್ಬನು ತನಗೆ ಏನೂ ಅಲ್ಲ ಎಂಬ ಭಾವನೆ-ಇರುತ್ತದೆ. ಆದರೆ ಸಮಾಜದಲ್ಲಿ ಆತ್ಮೀಯತೆ-ಎಂದರೆ ತಾನು ಎಲ್ಲರವನು, ಎಲ್ಲರು ತನ್ನವರು ಎಂಬ ಭಾವನೆ ಇರುತ್ತದೆ. ವ್ಯಕ್ತಿಯ ಗುಣಾವಗುಣದಿಂದ ಸಮಾಜಕ್ಕೆ ಲಾಭಹಾನಿಯಾಗುತ್ತಿರುವುದರಿಂದ ಸಮಾಜವು ವ್ಯಕ್ತಿಯ ಹಿತವನ್ನು, ವಿಕಾಸವನ್ನು ದುರ್ಲಕ್ಷಿಸದು. ವ್ಯಕ್ತಿಯ ವಿಕಾಸದ ಹೊಣೆಯನ್ನು ಸಮಾಜವು ಸ್ವಸಂತೋಷದಿಂದ ಹೊರುತ್ತದೆ. ಹೀಗಾಗಿ ಜನವು ಸಮಾಜವಾಗಿರುವಲ್ಲಿ ವ್ಯಕ್ತಿಗೆ ಆಶ್ರಯವು, ಆಸ್ಪದವು ದೊರೆವ ವ್ಯವಸ್ಥೆ ಇರುತ್ತದೆ. ಇದರಿಂದ ವ್ಯಕ್ತಿ ದೊಡ್ಡದಾಗುತ್ತದೆ ಮತ್ತು ಸಮಾಜವು ದೊಡ್ಡದಾಗುತ್ತದೆ. ಪ್ರಗತಿಗೆ ಇದುವೆ-ಸಮಾಜಭಾವನೆ-ಉಪಾಯವು. ಜನವು ಸಮೂಹವಾಗಿರುವಲ್ಲಿ ವ್ಯಕ್ತಿಯ ವಿಕಾಸಕ್ಕೆ ಆಸ್ಪದವಿಲ್ಲದಾಗಿ ಪ್ರಗತಿಯ ಆಶೆಯೆ ಉಳಿಯದು. ಪ್ರಗತಿ ಇಲ್ಲದಲ್ಲಿ ಅಧೋಗತಿ. ಸಮೂಹದಲ್ಲಿ ಯದುಪತಿಯಂತಹ ರತ್ನಗಳು ಜನದ ಕಾಲ್ತುಳಿತಕ್ಕೆ ಸಿಕ್ಕಿ ಹುಡಿಗೂಡುವ ಸಂಭವವೇ ಹೆಚ್ಚು. ಸಮಾಜದಲ್ಲಿ ಆ ರತ್ನಗಳಿಗೆ ಯೋಗ್ಯವಾದ ಸಂಸ್ಕಾರಗಳು ದೊರೆತು ಅವು ಉಜ್ಜ್ವಲವಾಗಿ ಪ್ರಕಾಶಿಸುವುವು. ಇದುವೆ ಸಮಾಜದ ಮಹೋನ್ನತಿ. ಆಚಾರ್ಯರೆ, ನಮ್ಮದು ಇನ್ನೂ ಸಮಾಜ-ಜೀವನವಿಲ್ಲ, ಸಮೂಹಜೀವನವಿದೆ. ಆದರೆ ತಮ್ಮ ವಶದಲ್ಲಿ ಯದುಪತಿಯಂತಹ ರತ್ನವು ಬಂದಿದೆ. ತಮ್ಮ ಹೊಣೆ ದೊಡ್ಡದು. ”

“ ನೀವು ಹೇಳುವುದು ಅಕ್ಷರಶಃ ಸತ್ಯವು. ಆದರೆ, ಡಾಕ್ಟರರೆ, ನಿಮ್ಮಂತಹ ಪ್ರಾಜ್ಞರು-ಅವರ ಸಂಖ್ಯೆ ಅಲ್ಪವಾಗಿದ್ದರೂ-ಇರುವಾಗ ನಮ್ಮ ಜೀವನವು ಸಮಾಜ-ಜೀವನವು ಏಕೆ ಆಗಬಾರದು ? ವಿಚಾರವಂತರು ಪ್ರಯತ್ನಿಸಿದರೆ ಇದು ಸಾಧ್ಯವಾಗಲೇಬೇಕೆಂದು ನನ್ನ ವಿಶ್ವಾಸವು. ಲೋಕಹಿತದೃಷ್ಟಿ, ಉದ್ಯೋಗ, ಬುದ್ಧಿ ಮತ್ತು ತ್ಯಾಗ ಈ ಸಾಮಗ್ರಿಯುಳ್ಳವನು, ಒಬ್ಬನೇ ಇದ್ದರೂ, ಎಷ್ಟೋ ಕೆಲಸವನ್ನು ಮಾಡುವನೆಂಬುದರಲ್ಲಿ ಸಂದೇಹವು ಬೇಡ. ಡಾಕ್ಟರರೆ, ನೀವು ಈ ದಿಶೆಯಲ್ಲಿ ಕಾರ್ಯವನ್ನು ಆರಂಭಿಸಬೇಕು. ಯದುಪತಿಯಂತಹ ರತ್ನಗಳಿಗೆ ಸಂಸ್ಕಾರಗಳು ದೊರೆತು, ಅವು ಉಜ್ಜ್ವಲವಾಗಿ ಪ್ರಕಾಶಿಸಿ ಸಮಾಜವು ಮಹೋನ್ನತಿಯನ್ನು ಪಡೆಯಬೇಕು. ಇಂದು ಶ್ರೀರಾಮನವಮಿ. ಶುಭದಿನದಲ್ಲಿ ಈ ಶುಭವಿಚಾರವು ಹುಟ್ಟಿದೆ. ನೀವು

ಮುಂದೆ ಬರುವಿರಾ ? ಮನುಷ್ಯನ ಅಂತಿಮಗತಿ ಮರಣವಲ್ಲ, ಮನುಷ್ಯನ ಅಂತಿಮಗತಿ-ಜೀವನವು-ಜ್ಞಾನಮಯ ಜೀವನವು, ಆನಂದಮಯ ಜೀವನವು, ಸತ್-ಚಿತ್- ಆನಂದವು. ಸಮಾಜ ಜೀವನದಿಂದ ಈ ಜೀವನವು ಸುಲಭ ಸಾಧ್ಯವು. ಸಮಾಜ ಜೀವನದಲ್ಲಿ ಪರಸ್ಪರಾಕರ್ಷಕತೆ ಇರುತ್ತದೆ. ಸರ್ವಹಿತ ಬುದ್ಧಿಯಿಂದ ಆಕರ್ಷಕತೆ ಹುಟ್ಟಿ ಅದು ಸಹಕಾರಕ್ಕೆ ಎಡೆಮಾಡುವುದು. ಇದುವೆ ಸರ್ವೋದಯದ, ಸತ್-ಚಿತ್-ಆನಂದದ ಮಾರ್ಗವು " एकमेका करूं सहाय्य । अवघे धरूं सुपंथ ". ಕತ್ತಲೆಯಲ್ಲಿ ಇರುವವನಿಗೆ ಪ್ರಕಾಶದ, ಸೌಂದರ್ಯದ ಮಾತು ಕಲ್ಪನೆಯ ಮಾತಾಗಿರುವಂತೆ ಸ್ವಾರ್ಥಾಂಧವಾದ ಸಮೂಹಜೀವನದ ವ್ಯಕ್ತಿಗೆ ಸರ್ವೋದಯದ ಮಾತು ಸ್ವಪ್ನ ಸೃಷ್ಟಿಯ ಮಾತಾಗಿರುತ್ತದೆ. ಆದರೆ ಸರ್ವೋದಯವು ಸ್ವಪ್ನಸೃಷ್ಟಿಯ ಕಂತೆಯ ಮಾತಲ್ಲ, ಸತ್ಯ ಸೃಷ್ಟಿಯ ಸಿದ್ಧಾಂತವು. ಡಾಕ್ಟರರೇ, ನಿಮ್ಮಂತಹ ಉದಾರಹೃದಯರು ಈ ಸಿದ್ಧಾಂತವನ್ನು ಜನತೆಗೆ ಸ್ಪಷ್ಟವಾಗಿಸಲು ಮುಂದುವರಿಯಬೇಕು. "

" ಆಚಾರ್ಯರೆ, ನನ್ನ ಬಾಯಿಂದ ಇಂದು ' ಸಮಾಜ-ಜೀವನ ' ವೆಂಬ ಶಬ್ದಸಮುಚ್ಚಯವು ಬಂದುದು ನಿಜವಾಗಿಯೂ ಪರಮಾತ್ಮನ ಕೃಪೆ ಯೆಂದು ನಾನು ಭಾವಿಸುತ್ತೇನೆ. ಸಮಾಜಜೀವನದ, ಸರ್ವೋದಯದ ಮರ್ಮವನ್ನು ತಾವು ಅರುಹಿದಿರಿ. ತಾವು ನನಗೆ ಮಾರ್ಗದರ್ಶಕರಾಗಿರಿ. ಸಮಾಜ ಜೀವನದ ಸೌಭಾಗ್ಯವನ್ನು ಜನವು ಪಡೆಯಲಿ. "

" ಡಾಕ್ಟರರೆ, ಸನ್ಮಾರ್ಗದಲ್ಲಿ ನಡೆಯಲಿಚ್ಛಿಸುವವರಿಗೆ ದೇವದೇವನೇ ಮಾರ್ಗದರ್ಶಕನಾಗುವನು. ಸನ್ಮಾರ್ಗವು ಎಂದರೆ ಸರ್ವೋದಯದ ಮಾರ್ಗವು ಸತ್ಯದ ಮಾರ್ಗವು, ಜ್ಯೋತಿಯ ಮಾರ್ಗವು, ಅಮೃತದ ಮಾರ್ಗವು. ಈ ಮಾರ್ಗದಲ್ಲಿ ನಡೆಯಲು ಹಂಬಲಿಸುವವನನ್ನು ಕೈ ಹಿಡಿದು ನಡೆಯಿಸುವವನು ದೇವದೇವನೇ ಎಂದು ಮನಗಂಡ ಋಷಿವರನು, ' असतो मा सद् गमय । तमसो मा ज्योतिर् गमय । मृत्योर् मा अमृतं गमय ।' ಎಂದು ಅನನ್ಯಭಾವ ದಿಂದ ಆತನನ್ನು ಪ್ರಾರ್ಥಿಸಿರುವನು. ಇದುವೆ ನಮ್ಮ ಪ್ರಾರ್ಥನೆಯಾಗಲಿ ಮತ್ತು ಜನಕ್ಕೆ ಸಮಾಜ-ಜೀವನದ ಸೌಭಾಗ್ಯವು ಲಭಿಸಲಿ. " ।

ಆಚಾರ್ಯರೂ ಡಾಕ್ಟರರೂ ಭಕ್ತಿಪೂರ್ವಕವಾಗಿ 'असतो मा सद् गमय' ಮಂತ್ರವನ್ನು ಹೇಳಿದರು. ಅವರು ಆ ಮಂತ್ರವನ್ನು ಪ್ರಸನ್ನಚಿತ್ತದಿಂದ

ಉಚ್ಚರಿಸುತ್ತಿರುವಾಗ ಸರ್ವೋದಯದ ಮಾರ್ಗದಲ್ಲಿ ನಡೆಯಬೇಕೆಂಬ ಅವರ ಮನೋನಿಶ್ಚಯವು ಸ್ಪಷ್ಟವಾಗಿ ವ್ಯಕ್ತವಾಗುತ್ತಿದ್ದಿತು.

ಮುಂದೆ ದಿನಗಳು ಹೋದಂತೆ ಡಾ. ಶ್ಯಾಮರಾಯರ ಜೀವನದಲ್ಲಿ ಪರಿವರ್ತನಗಳು ತೋರಿದುವು. ಮೊದಲಿನ ಆಡಂಬರವಿಲಾಸಗಳು ಒಂದೊಂದಾಗಿ ಹೋಗಿ ಅವರ ಜೀವನವು ಸರಲತೆಯಿಂದ ಮತ್ತು ತ್ಯಾಗದಿಂದ ಸುಂದರವಾಗತೊಡಗಿತು. ಸಿರಿವಂತರಿಗೆ ತಮ್ಮ ಮನೆಯನ್ನು ಸುಂದರವಾಗಿಸಬೇಕೆಂದು ಒಂದು ಹುಚ್ಚು. ಸೌಂದರ್ಯಾಭಿರುಚಿ ಹೃದಯವನ್ನು ಉದಾರವಾಗಿಸುತ್ತದೆ ಮತ್ತು ಮನಸ್ಸನ್ನು ದೊಡ್ಡದಾಗಿಸುತ್ತದೆ ಎಂಬುದು ಸತ್ಯವು. ಆದರೆ ಸೌಂದರ್ಯದೃಷ್ಟಿ ವಿವೇಕವುಳ್ಳದ್ದಾಗಿರಬೇಕು, ಅದು ವಿಕೃತವಾಗಿರಕೂಡದು. ಬಲ್ಬೆಲೆಯ ವಸ್ತುಗಳ ಸಂಗ್ರಹದಿಂದ ಸೌಂದರ್ಯವು ಉಂಟಾಗುವುದೆಂಬ ಗ್ರಹಿಕೆಯಿಂದ ಕಂಡಕಂಡ ವಸ್ತುಗಳನ್ನು ಬೆಲೆಕೊಟ್ಟು ತಂದು ಅವುಗಳಿಂದ ಮನೆಯನ್ನು ತುಂಬಿದರೆ ವೈರೂಪ್ಯವು ಉಂಟಾಗುವುದಲ್ಲದೆ ಸೌಂದರ್ಯವು ಒದಗದು. ಈ ವರೆಗೆ ತಾವು ಮನೆಯಲ್ಲಿ ಸಂಗ್ರಹಿಸಿದ ವಸ್ತುಗಳತ್ತ ಡಾಕ್ಟರ ಶ್ಯಾಮರಾಯರ ದೃಷ್ಟಿ ಹೋಯ್ತು. ಬೇರೆಬೇರೆ ಕಟ್ಟಿಗೆಗಳ ವಸ್ತುಗಳು, ಧಾತುಗಳ ವಸ್ತುಗಳು, ಶಿಲೆಗಳ ವಸ್ತುಗಳು, ಹಸ್ತಿದಂತದ ವಸ್ತುಗಳು, ಅವುಗಳನ್ನು ಇಡಲು ಮಾಡಿಸಿದ ಚಿತ್ರವಿಚಿತ್ರ ಆಸನಗಳು, ಪ್ರಕೃತಿ ದೃಶ್ಯಗಳ ಚಿತ್ರಗಳು, ಹಾಸಿದ ಮತ್ತು ಇಳಿಯಬಿಟ್ಟ ಉಣ್ಣೆಯ ಮತ್ತು ರೇಶ್ಮೆಯ ಬಟ್ಟೆಗಳು, ಇವೆಲ್ಲವನ್ನು ನೋಡಿ ಅವರಿಗೆ ನಗೆ ಬಂದಿತು. ಅವುಗಳಲ್ಲಿ ನಿಜವಾಗಿಯೂ ಸಂಗ್ರಾಹ್ಯವಾದ ವಸ್ತುಗಳು ಬಹು ಸ್ವಲ್ಪ, ಅಂತಹವಿಂತಹವೇ ಬಹಳವಾಗಿದ್ದುವು. "ಇವಕ್ಕೋಸುಗ ಎಷ್ಟೊಂದು ಹಣವನ್ನು ತೆತ್ತಿರುವೆನಲ್ಲ!" ಎಂದು ತಮ್ಮಷ್ಟಕ್ಕೆ ಅವರು ನುಡಿದರು. ಮತ್ತೆ ಅವರ ದೃಷ್ಟಿ ವಿವಿಧ ಮೃಗಗಳ ತಲೆಗಳ ಕಡೆಗೆ ಹೋಯ್ತು. ಅವನ್ನು ಅವರು ಬಹಳ ಹೊತ್ತು ನೋಡಿದರು. ಅವರ ಮುಖವು ಸಣ್ಣದಾಯ್ತು, ಕಣ್ಣುಗಳು ನೀರುದುಂಬಿದುವು. "ಅಯ್ಯೋ, ನಿರ್ದಯತೆಯಿಂದ ಮತ್ತು ಕ್ರೌರ್ಯದಿಂದ ಸೌಂದರ್ಯವು ಒದಗಬಹುದೆ! ಏನು ವಿಕೃತ ದೃಷ್ಟಿಯಿದು! ಈ ಭ್ರಾಂತಿ ನನ್ನನ್ನು ಆವರಿಸಿತು ಹೇಗೆ?" ಎಂದು ಅವರು ನಿಟ್ಟುಸಿರಿಟ್ಟರು.

ಪರಮಾತ್ಮನು ಮಾನವನಿಗೆ ಬಹು ವಿಶಾಲವಾದ ಹೃದಯವನ್ನು ದಯೆಪಾಲಿರುವನು. ಆದರೆ ಮಾನವನು ಅವಿವೇಕಕ್ಕೆ ವಶನಾಗಿ ಸ್ವಾರ್ಥದ ಬಂಧನಗಳಿಂದ ಅದನ್ನು ಸಂಕುಚಿತವಾಗಿಸುವನು. ಸತ್ಸಂಗದ ಪ್ರಭಾವದಿಂದ ವಿವೇಕವು ತಲೆದೋರಿ ಸ್ವಾರ್ಥದ ಬಂಧನಗಳು ಹರಿಯುತ್ತ ಹೋದಂತೆ ಹೃದಯವು ತನ್ನ ಪ್ರಸಾದಪೂರ್ಣವಾದ ವಿಶಾಲತೆಯನ್ನು ತಿರುಗಿ ಪಡೆವುದು. ಸಾಧುಗಳ ಹೃದಯಗಳು ವಿಕಸಿತವಾಗಿರುವುದರಿಂದ ಅವರು ಅಷ್ಟೊಂದು ಪ್ರಸನ್ನರಾಗಿ ತೋರುವರು. ಡಾಕ್ಟರರ ಮುಖದ ಮೇಲೆ ಈಗ ಪ್ರಸನ್ನತೆ ಕಂಗೊಳಿಸಿತು.

ಡಾಕ್ಟರರು ಇರುತ್ತಿದ್ದ ಮನೆ ಬಲು ದೊಡ್ಡದಾಗಿತ್ತು. ಅವರು, ಅವರ ಹೆಂಡತಿ, ಇಬ್ಬರು ಗಂಡು ಮಕ್ಕಳು ಮತ್ತು ಒಬ್ಬ ಮಗಳು. ಈ ಐವರಿಗೋಸುಗ ಅಷ್ಟೊಂದು ದೊಡ್ಡಮನೆ ಏಕೆ ಎಂಬ ವಿಚಾರವು ಅವರಿಗೆ ಈ ವರೆಗೆ ಬಂದಿರಲಿಲ್ಲ. 'ದುಡ್ಡು ಬರುತ್ತಿದೆ, ದೊಡ್ಡ ಮನೆಯನ್ನು ಕಟ್ಟಿಸು,' ಈ ಮನೋವೃತ್ತಿಗೆ ಬಲಿಯಾಗಿ ಮನುಷ್ಯನು ಆತ್ಮೋನ್ನತಿಗೋಸುಗ ಉಪಯೋಗಿಸಬೇಕಾದ ತನ್ನ ಶಕ್ತಿಗಳನ್ನು ಹೇಗೋ ಹೇಗೋ ವ್ಯರ್ಥವಾಗಿಸುವನು. ಡಾಕ್ಟರರ ದೃಷ್ಟಿ ಈಗ ಅಂತರ್ಮುಖವಾದುದರಿಂದ ತಮ್ಮ ಶಕ್ತಿಗಳನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಲು ಅವರು ನಿಶ್ಚಯಿಸಿದರು. ಅವರಿಗೆ ತಾವು ಇರುವ ಮನೆಯಲ್ಲದೆ ತಮ್ಮ ಕುಟುಂಬಕ್ಕೆ ತಕ್ಕುವಾದ ಬೇರೆ ಎರಡು ಚಿಕ್ಕ ಮನೆಗಳಿದ್ದುವು. ಒಂದು ಚಿಕ್ಕ ಮನೆಗೆ ಅವರು ಸ್ಥಲಾಂತರಿಸಿದರು, ಮತ್ತು ದೊಡ್ಡ ಮನೆಯನ್ನು ವಿದ್ಯಾರ್ಥಿನಿಲಯವಾಗಿ ಮಾರ್ಪಡಿಸಿದರು. ಬೇರೆ ಎಷ್ಟೋ ಚಿಕ್ಕ ಪುಟ್ಟ ಮಾರ್ಪಾಟುಗಳನ್ನು ಅವರು ತಮ್ಮ ಜೀವನದಲ್ಲಿ ಮಾಡಿದರು. ಅವರ ಹೆಂಡತಿ ರಮಾಬಾಯಿ ಅವರಿಗೆ ಎಲ್ಲ ಬಗೆಯಿಂದಲೂ ಪ್ರೋತ್ಸಾಹವಿತ್ತರು, ಮತ್ತು ಈ ಹೊಸಬಾಳಿನಲ್ಲಿ ಒಂದು ವಿಲಕ್ಷಣವಾದ ಆನಂದವನ್ನು ಕಂಡರು. ಆಡಂಬರದ ಜೀವನವು ನೀರಸಜೀವನವು; ಅದೊಂದು ಗಾಳಿಯೊಡನೆ ಗುದ್ದಾಟವು. ಆಡಂಬರವಿಲ್ಲದ ಜೀವನವು ಸ್ವಾರಸ್ಯ ಪೂರ್ಣ ಜೀವನವು; ಈಸು ಬಲ್ಲ ಸಮರ್ಥನಿಗೆ ಸಮುದ್ರದ ತರಂಗಗಳ ಮಧ್ಯದಲ್ಲಿ ಈಸುತ್ತಿದ್ದರೆ ಹೇಗೊ ಹಾಗೆ. ಮಂಚದಿಂದ ಮಣೆಗೆ, ಮಣೆಯಿಂದ ಮಂಚಕ್ಕೆ; ಆರಾಮವಾಗಿ ತೋರುವುದಲ್ಲವೆ ? ಆದರೆ ಆಗ ರಮಾಬಾಯಿಗೆ ನಿಜವಾದ

ತೃಪ್ತಿ ಇರಲಿಲ್ಲ. ಒಲೆಯಿಂದ ಒನಕೆಗೆ, ಒನಕೆಯಿಂದ ಒಲೆಗೆ; ಕಷ್ಟವಾಗಿ ತೋರುವುದಲ್ಲವೆ ? ಆದರೆ ಈಗ ರಮಾಬಾಯಿಗೆ ನಿಜವಾದ ತೃಪ್ತಿ ಇದೆ. ಅವರು ತಮ್ಮ ಗಂಡನಿಂದ ಸೂಲಗಿತ್ತಿಯ ಕೆಲಸವನ್ನು ಕಲಿತರು, ಅದರಲ್ಲಿ ಕೌಶಲ್ಯವನ್ನು ಸಂಪಾದಿಸಿದರು. ಈ ಕೆಲಸವನ್ನು ಅವರು ಲಕ್ಷ್ಮೀಬಾಯಿಗೂ ಸಾವಕ್ಕನಿಗೂ ಕಲಿಸಿದರು. ಇದರಿಂದ ಇತರ ಭಗಿನಿಯರಿಗೆ ನೆರವಾಗಲು ಈ ಮೂವರು ಸ್ತ್ರೀಯರಿಗೆ ಆಗಾಗ ಸಂದರ್ಭಗಳು ಒದಗುತ್ತಿದ್ದುವು. ಹೀಗೆ ಅವರ ಜೀವನವು ಲೋಕೋಪಕಾರಿಯಾದುದರಿಂದ ಸುಂದರವಾಯ್ತು.

* * * *

## ೧೨

ನಾಲ್ಕು ವರ್ಷಗಳು ಸಂದುವು. ಈಗ ಯದುಪತಿ ಮೆಟ್ರಿಕ್ ವರ್ಗದಲ್ಲಿ ಇದ್ದನು.

ಒಂದು ದಿನ ಮಧ್ಯಾಹ್ನದ ತರುವಾಯದ ಬಿಡುವಿನಲ್ಲಿ ಆತನು ತನ್ನ ಶಾಲೆಯ ಆವಾರದಲ್ಲಿ ಒಂದು ಹೊಂಗೆಯ ಮರದ ಕೆಳಗೆ ವಿಚಾರಮಗ್ನನಾಗಿ ಕುಳಿತಿದ್ದನು. ಆತನ ಮುಖವು ದುಃಸಹ್ಯವಾದ ಮನೋವ್ಯಥೆಯನ್ನು ಸೂಚಿಸುತ್ತಿದ್ದಿತು “ನಾನು ಶಿಕ್ಷಕರು ಹೇಳಿದ ಲೆಕ್ಕಗಳನ್ನು ಬಿಡಿಸಿಕೊಂಡು ಬಂದಿದ್ದೆನು. ಆ ಪುಸ್ತಕವು ಎಲ್ಲಿ ಹೋಯ್ತೆನ್ನಬೇಕು ? ಇಂದಿನವರೆಗೆ ಒಮ್ಮೆಯೂ ಹೀಗಾಗಿರಲಿಲ್ಲ. ನನ್ನನ್ನು ಕೇಳದೆ ನನ್ನ ಪುಸ್ತಕಗಳಿಗೆ ಯಾರೂ ಕೈ ಹಚ್ಚುತ್ತಿರಲಿಲ್ಲ. ಎರಡು ಲೆಕ್ಕಗಳು ಬಲು ಗಡಚಾಗಿದ್ದುವು. ಅವನ್ನೂ ನಾನು ಬಿಡಿಸಿದ್ದೆನು ನಾನು ಶಾಲೆಗೆ ಬಂದ ಬಳಿಕ ಹನುಮಂತನು ಮತ್ತು ಶಂಕರನು ಅವನ್ನು ಬಿಡಿಸಿರುವೆಯೋ ಎಂದು ನನ್ನನ್ನು ಕೇಳಿದರು. ನಾನು ಬಿಡಿಸಿದ್ದುದನ್ನು ಅವರಿಗೆ ತೋರಿಸಿದೆನು. ಆದರೆ ಶಿಕ್ಷಕರು ಬಿಡಿಸಿದ ಲೆಕ್ಕಗಳನ್ನು ತೋರಿಸೆಂದು ಹೇಳಿದಾಗ ಆ ಪುಸ್ತಕವೇ ನನ್ನ ಚೀಲದಲ್ಲಿ ಇರಲಿಲ್ಲ ನಾನು ಬಿಡಿಸಿ ತಂದಿದ್ದೇನೆಂದು ಹೇಳಿದರೆ ಶಿಕ್ಷಕರು ನನ್ನ ಮಾತನ್ನು ನಂಬಲಿಲ್ಲ. ಹನುಮಂತನೂ ಶಂಕರನೂ ಬಿಡಿಸಿ ತಂದಿದ್ದುದನ್ನು ನಾವು ನೋಡಿದೆವೆಂದು ಹೇಳಿದರು. ಆದರೆ ಶಿಕ್ಷಕರು ಅವರನ್ನೂ ನಂಬಲಿಲ್ಲ.

' ಓತಿಕಾಟಕ್ಕೆ ಬೇಲಿಯ ಸಾಕ್ಷಿ !' ಎಂದರು ! ಮನೆಯಲ್ಲಿ ಮಾಡಿಕೊಂಡು ಬರಲು ಹೇಳಿದುದನ್ನು ಒಮ್ಮೆಯಾದರೂ ನಾನು ತಪ್ಪಿಸಿರುವೆನೆ ? ಆದರೆ ಇಂದು ಶಿಕ್ಷಕರು ನನ್ನನ್ನು ಸುಳ್ಳುಗಾರರಲ್ಲಿ ಎಣಿಸಿದರಲ್ಲ ! ಬೇರೆ ನಾಲ್ಕಾರು ಹುಡುಗರು ತಮ್ಮ ಪುಸ್ತಕವನ್ನು ತಂದಿರಲಿಲ್ಲ. ಲೆಕ್ಕಗಳು ತಮಗೆ ಬರಲಿಲ್ಲವೆಂದು ಅವರು ಹೇಳಿದರು. ಪುಸ್ತಕಗಳನ್ನು ತಂದಿರಲಿಲ್ಲವೆಂದು ಶಿಕ್ಷಕರು ಅವರನ್ನು ಎದ್ದು ನಿಲ್ಲಿಸಿದರು. ಆದರೆ ನಾನು ಸುಳ್ಳುಹೇಳಿದೆನೆಂದು ಅವರು ನನ್ನನ್ನು ಎದ್ದು ನಿಲ್ಲಿಸಿದರು ! ಹನುಮಂತನನ್ನು ಮತ್ತು ಶಂಕರನನ್ನು ಅದೇ ಕಾರಣವನ್ನು ಹೇಳಿ ಎದ್ದು ನಿಲ್ಲಿಸಿದರು. ನನಗೆ ಎಂತಹ ಅಪವಾದವಿದು ! ಯಾರಿಗಾದರೂ ನಾನು ಕೆಡಕು ಬಗೆದಿರುವೆನೆ ? ನನಗೇಕೆ ಈ ಆಪತ್ತು ? ಯಾರು ಕದ್ದಿರಬಹುದು ನನ್ನ ಪುಸ್ತಕವನ್ನು ? ಏಕೆ ಕದ್ದಿರಬಹುದು ? ನನ್ನ ಹೆಸರಿಗೆ ಎಂತಹ ಕುಂದು ಬಂದಿತಲ್ಲ ! ಇಷ್ಟು ದಿವಸ ನಾನು ಸಂಭಾವಿತನೆನಿಸಿಕೊಂಡಿದ್ದೆನು. ಆ ನನ್ನ ಹೆಸರನ್ನು ಕಳೆದುಕೊಂಡೆನು. ಅಯ್ಯೋ ! ಎಂತಹ ಪೆಟ್ಟು ಇದು !" ಯದುಪತಿಯ ಕಣ್ಣುಗಳಿಂದ ನೀರು ಧಾರೆಯಾಗಿ ಹರಿಯತೊಡಗಿತು.

ಅಷ್ಟರಲ್ಲಿ ಭಟ್ಟರು ಶಾಲೆಯ ಆವಾರದಲ್ಲಿ ಬರುತ್ತಿರುವುದನ್ನು ಕಂಡು ಯದುಪತಿ ಕಣ್ಣೊರಸಿಕೊಂಡು ಅವರ ಕಡೆಗೆ ಹೋದನು ಮತ್ತು, "ತಾತಯ್ಯಾ, ಯಾವಾಗ ಬಂದಿರಿ ?" ಎಂದು ಅವರಿಗೆ ನಮಸ್ಕಾರಮಾಡಿದನು.

" ನೀನು ಊಟಮಾಡಿ ಶಾಲೆಗೆ ನಡೆದಿದ್ದೆ, ಆಗ ನಾನು ಬಂದೆನು. ಬಳಿಕ ಸ್ನಾನಮಾಡಿ, ಊಟವನ್ನು ತೀರಿಸಿ, ಸ್ವಲ್ಪ ಅಡ್ಡಾಗಿ ಇಲ್ಲಿಗೆ ಬಂದೆನು. ಇದೇನು, ಯದುಪತೀ, ನಿನ್ನ ಕಣ್ಣುಗಳು ಉಬ್ಬಿದಂತೆ ತೋರುತ್ತವಲ್ಲ ? ಅಳುತ್ತಿದ್ದೆಯೇನು ? ಅದೇಕಯ್ಯಾ, ಅಳುವುದು ? ಯಾರಾದರೂ ಸಿಟ್ಟುಮಾಡಿದರೋ ? ಏನು, ಮಗು, ನೀನು ಮಾಡಿದುದು ?" ಭಟ್ಟರು ಕೇಳಿದರು.

ಯದುಪತಿ ನಡೆದ ಸಂಗತಿಯನ್ನು ವಿವರಿಸಿ ಎಂದನು, " ತಾತಯ್ಯಾ, ಶಿಕ್ಷಕರು ನನಗೆ ಸುಳ್ಳುಗಾರನೆಂದು ಅಪವಾದ ಕೊಡಬೇಕೆ ? ಅವರು ಸರಿಯಾಗಿ ವಿಚಾರಮಾಡಿದರೆ ? ಒಮ್ಮೆಯಾದರೂ ಅವರು ಹೇಳಿದುದನ್ನು ಮಾಡಲು ನಾನು ತಪ್ಪಿಲ್ಲ. ಎಲ್ಲಿಯೂ ನಾನು ಸುಳ್ಳುನುಡಿದಿಲ್ಲ ಆದರೂ

ನನಗೆ ಕೆಟ್ಟ ಹೆಸರು ಬಂದಿತಲ್ಲ! ವರ್ಗದಲ್ಲಿ, ಈ ಬಗೆಯ ಅಪಮಾನ ನನಗೆ ಆಗಬೇಕೇನು ? ತಾತಯ್ಯಾ, ನಾನು ಸುಳ್ಳುಹೇಳಿರಬಹುದೆಂ ನಿಮಗೆ ಎನಿಸುವುದೇನು?" ಮುಂದೆ ಆತನ ಬಾಯಿಂದ ಶಬ್ದಗಳು ಹೊರಡಃ ಆತನು ಅಳತೊಡಗಿದನು.

ಭಟ್ಟರು ಯದುಪತಿಯ ಹೆಗಲ ಮೇಲೆ ಕೈಯಿರಿಸಿ ಎಂದರು, "ಯ ಪತೀ, ನೀನು ಸುಳ್ಳುಹೇಳಿರುವೆಯೆಂದು ನಾನು ಹೇಗೆ ನಂಬಲಿ ? ನಿ ಸ್ವಭಾವವನ್ನು ನಾನು ಅರಿಯದೆ ಇಲ್ಲ. ನಿನ್ನನ್ನು ಸುಳ್ಳುಗಾರನಾಗಿ ಎಣಿಸಿ ನಿನ್ನ ಶಿಕ್ಷಕರು ಸರಿಯಾಗಿ ವಿಚಾರಮಾಡಿಲ್ಲವೆಂಬುದು ಸ್ಪಷ್ಟವಿದೆ. ಅವ ಹೊಸದಾಗಿ ಬಂದಿರುವರೇನೋ, ಮಗು ?"

"ಇಲ್ಲ, ತಾತಯ್ಯಾ, ಅವರು ಹಳಬರು. ನನ್ನನ್ನು ಅರಿಯದಿ ಶಿಕ್ಷಕರು ಈ ಶಾಲೆಯಲ್ಲಿ ಇಲ್ಲ."

"ಈ ಮೊದಲು ಎಂದಾದರೂ ಗಣಿತ ಶಿಕ್ಷಕರನ್ನು ಯಾವಕಾರ ದಿಂದಾದರೂ ರೇಗಿಸಿದ್ದೆಯಾ?"

"ಇಲ್ಲ, ತಾತಯ್ಯಾ, ನಾನು ಯಾರನ್ನೂ ಯಾವಕಾಲದಲ್ಲೂ ರೇ ಸಿಲ್ಲ."

"ನಿಜವಾಗಿಯೂ ನೀನು ನಿರಪರಾಧಿ. ಯೋಗ್ಯವಿಚಾರವಿಲ್ಲದೆ ಶಿಕ್ಷಕರು ನಿನಗೆ ಅಪವಾದವನ್ನು ಕೊಟ್ಟರು, ತಪ್ಪು ಮಾಡಿದರು. ಆದ ಯದುಪತೀ, ನೀನು ಕೋಪಿಸಿಕೊಂಡು ಅವರಿಗೆ ಏನಾದರೂ ಅಯೋಗ್ಯವನ ನುಡಿದೆಯಾ ?"

"ನನಗೆ ಕೋಪವೇನೋ ಬಂದಿತು. ಆದರೆ ಅನುಚಿತವನ್ನು ನಾ ನುಡಿಯಲಿಲ್ಲ. 'ಸರ್ವಥಾ ನಾನು ಸುಳ್ಳುಗಾರನಲ್ಲ. ನೀವು ಹೇಳುವಿರೆಂ ನಾನು ಎದ್ದು ನಿಲ್ಲುವೆನು, ಸುಳ್ಳುಗಾರನೆಂದು ಶಿಕ್ಷೆಯನ್ನು ಅನುಭವಿಸ ನಾನು ನಿಲ್ಲುವುದಿಲ್ಲ.' ಎಂದು ಹೇಳಿ ಎದ್ದುನಿಂತೆನು. ಮುಂದೆ ಅವ ನನ್ನನ್ನು ಮಾತನಾಡಿಸಲಿಲ್ಲ, ನಾನೂ ಮಾತನಾಡಲಿಲ್ಲ."

"ನೀನು ಯೋಗ್ಯನಯ್ಯಾ ಯದುಪತಿ. ನೀನು ಸುಳ್ಳುಗಾರನೆಂ ಅವರು ಎಂದರೆ, ನೀನು ಸುಳ್ಳುಗಾರನಾಗುವುದಿಲ್ಲ. ನಿನ್ನಲ್ಲಿ ತಪ್ಪು ಇ ತಪ್ಪಿದ್ದವನು ವ್ಯಥೆಪಡಬೇಕು. ನೀನು ಸಮಾಧಾನದಿಂದಿರು, ಮಗು."

“ ತಾತಯ್ಯಾ, ಗಣಿತಶಿಕ್ಷಕರು ಇತ್ತ ಕಡೆಗೇ ಬರುತ್ತಿರುವರು. ಅವರ ಜೊತೆಯಲ್ಲಿ ನಮ್ಮ ವರ್ಗದ ಹುಡುಗನೊಬ್ಬನಿದ್ದಾನೆ. ಆವನು ಕಮಲಾಕ್ಷ. ”

ಯದುಪತಿ ಇದ್ದಲ್ಲಿಗೆ ಗಣಿತ ಶಿಕ್ಷಕರೂ ಕಮಲಾಕ್ಷನೂ ಬಂದರು.

ಶಿಕ್ಷಕರು ಎಂದರು, “ ಯದುಪತೀ, ಈ ಹಿರಿಯರು ಯಾರು ?”

“ ನನ್ನ ತಾತಯ್ಯನವರು, ಸ್ವಾಮಿ. ”

“ ವರ್ಗದಲ್ಲಿ ಇಂದು ಏನಾಯ್ತೆಂಬುದು ಅವರಿಗೆ ಗೊತ್ತಾಗಿದೆಯೊ ?”

“ ನಡೆದುದೆಲ್ಲವನ್ನು ನಾನು ಅವರಿಗೆ ಹೇಳಿದ್ದೇನೆ. ”

“ ಒಳಿತಾಯ್ತು. ಹಿರಿಯರ ಮುಂದೆ ನನ್ನ ತಪ್ಪನ್ನು ಒಪ್ಪಿಕೊಳ್ಳುವೆನು. ಹಿರಿಯರೆ, ನಾನು ಪೂರ್ಣವಾಗಿ ವಿಚಾರಿಸದೆ ಯದುಪತಿಯನ್ನು ಸುಳ್ಳುಗಾರನಾಗಿ ಎಣಿಸಿ ನಿರಪರಾಧಿಯಾದ ಆತನನ್ನು ವರ್ಗದಲ್ಲಿ ಎದ್ದು ನಿಲ್ಲಿಸಿ ಅಪಮಾನಗೊಳಿಸಿದೆನು. ನಾನು ತಪ್ಪುಮಾಡಿದೆನು. ”

“ ಎಂತಹ ತಪ್ಪನ್ನು ನೀವು ಮಾಡಿದಿರಲ್ಲ ! ಮಕ್ಕಳ ಅಂತಃಕರಣವು ವಿಕಾಸಗೊಳ್ಳುವಂತೆ ಮಾಡುವುದು ಶಿಕ್ಷಕರ ಕರ್ತವ್ಯವಾಗಿರಲು ಹೀಗೆ ಅವಿಚಾರದಿಂದ ವರ್ತಿಸಿ ನೀವು ಯದುಪತಿಯ ಅಂತಃಕರಣದ ಮೇಲೆ ಬರೆಯೆಳೆದಿರಿ ! ಗುರುಭಕ್ತಿ ವಿದ್ಯಾರ್ಥಿಗಳ ಹೃದಯವನ್ನು ಅರಳಿಸುವುದು. ಆದರೆ ಇಂದು ನೀವು ವರ್ತಿಸಿದಂತೆ ಶಿಕ್ಷಕರು ವರ್ತಿಸಿದರೆ ವಿದ್ಯಾರ್ಥಿಗಳಲ್ಲಿ ಗುರುಭಕ್ತಿ ಹುಟ್ಟುವುದೆಂತು ? ಶಿಕ್ಷಕನು ತನ್ನ ಹೊಣೆಯನ್ನು ಮರೆತರೆ ಆಗುವ ಕೇಡು ಅಷ್ಟಿಷ್ಟಲ್ಲ. ಮಗುವನ್ನು ಬೆಳೆಯಿಸುವ ತಾಯಿಗೆ ಅಥವಾ ತಂದೆಗೆ ಎರಡು ಕಣ್ಣುಗಳಿದ್ದರೆ ಸಾಕು. ಆದರೆ ವಿದ್ಯಾರ್ಥಿಯ ಹೃದಯವಿಕಾಸದ ಹೊಣೆಯನ್ನು ಹೊತ್ತ ಶಿಕ್ಷಕನಿಗೆ ಮೈ ತುಂಬ ಕಣ್ಣುಗಳು ಬೇಕು. ಶಿಕ್ಷಕರಾಗಿದ್ದ ನಿಮಗೆ ಈ ಮಾತು ಗೊತ್ತಿರಬೇಕಲ್ಲವೆ ? ಆದರೂ ನೀವು ಪ್ರಾಕೃತರಂತೆ ಇಂದು ವರ್ತಿಸಿದಿರಲ್ಲ ! ಮಗುವಿನ ಹೃದಯದಲ್ಲಿಯ ದೇವನನ್ನು ಅವಮಾನಗೊಳಿಸಿದಿರಲ್ಲ ! ಏನೋ ಏನೊ ! ಆದರೆ ತಪ್ಪು ಗೊತ್ತಾದೊಡನೆ ಪ್ರಾಂಜಲವಾಗಿ ಒಪ್ಪಿಕೊಂಡಿರಿ. ಇದು ಸಾಮಾನ್ಯಗುಣವಲ್ಲ. ಯದುಪತೀ, ನಿನ್ನ ಗಣಿತ ಶಿಕ್ಷಕರು ದೊಡ್ಡವರಯ್ಯಾ. ನಿನಗೆ ತಮ್ಮಿಂದಾದ ಅಪಮಾನವನ್ನು ಅಳಿಯಿಸಲು ಓಡಿಬಂದಿರುವರು ನೋಡು. ನಿನ್ನ ಗುರುಭಕ್ತಿ ಅಚ್ಚಳಿಯದೆ ಇರಲಿ, ಮಗು. ನಿನ್ನ ಸತ್ಯನಿಷ್ಠೆ ದೃಢವಾಗಿ ಇರಲು ಗುರುಗಳ ಆಶೀರ್ವಾದವು ಬೇಕಯ್ಯಾ. ಅವರಿಗೆ ನಮಸ್ಕಾರಮಾಡು, ಅವರು ನಿನ್ನನ್ನು ಹರಸುವರು. ”

ಯದುಪತಿ ಶಿಕ್ಷಕರ ಕಾಲಿಗೆರಗಿದನು. ಶಿಕ್ಷಕರು, "ಯದುಪ ನೀನು ನಿರ್ಮಲನು. ದೊಡ್ಡವನಾಗು, ಮಗು," ಎಂದು ಹರಸಿದರು. ಮ ಎಂದರು, "ನಿನ್ನ ಪುಸ್ತಕವನ್ನು ತೆಗೆದುಕೊಂಡವನು ಈ ಕಮಲಾಕ್ಷ ನೀನು ಬಿಡಿಸಿದ ಲೆಕ್ಕಗಳನ್ನು ತನ್ನ ಪುಸ್ತಕದಲ್ಲಿ ಬರೆದುಕೊಂಡು ನಿನ್ನ ಪು ವನ್ನು ತಿರುಗಿ ನಿನ್ನ ಚೀಲದಲ್ಲಿ ಇಡುವಷ್ಟರಲ್ಲಿ ಶಿಕ್ಷಕರು ವರ್ಗದಲ್ಲಿ ಬಂದ ಮುಂದಿನ ಅವಧಿಗಳಲ್ಲಿಯೂ ಹೀಗೆಯೆ ಆಯ್ತು. ನಾನು ಇಂದು ನಿ ವರ್ಗಕ್ಕೆ ಯಾವುದೊ ಕಾರಣದಿಂದ ಉಗ್ರನಾಗಿಯೆ ಬಂದಿದ್ದೆನು. ಮನುಷ್ಯ ಉಗ್ರನಾಗಿರುವಾಗ ಸರಿಯಾಗಿ ವಿಚಾರಮಾಡಲು ಅವನಿಗೆ ಶಕ್ಯವಾಗುವುದಿ ಇಂದು ಅದೇ ಹಾಡು ನನ್ನದಾಯ್ತು ಕಮಲಾಕ್ಷನಿಗೆ ಆಗ ತನ್ನ ತಪ್ಪ ಒಪ್ಪಿಕೊಳ್ಳಲು ಧೈರ್ಯವಾಗಲಿಲ್ಲ. ತನ್ನ ಅಪರಾಧದಿಂದ ನಿನಗೆ ಅಪ ದವು ಬಂದಿತೆಂದು ಮತ್ತು ನಿನಗೆ ಅಪಮಾನವು ಆಯ್ತೆಂದು ಅವನಿಗೆ ಪ ತ್ತಾಪವಾಯ್ತು. ಇದೇ ಈಗ ಅವನು ನನ್ನ ಬಳಿಗೆ ಬಂದು ತನ್ನ ತಪ್ಪ ಒಪ್ಪಿಕೊಂಡನು. ಈಗ ನಾವಿಬ್ಬರೂ ನಿನ್ನ ಕ್ಷಮೆಯನ್ನು ಕೇಳಲು ಬ ದ್ದೇವೆ."

"ಸ್ವಾಮೀ, ಈಗಲೂ ನೀವು ನನಗೆ ದಿವ್ಯವಾದ ಪಾಠವನ್ನು ಕಲಿ ತ್ತಿದ್ದೀರಿ. ನಾನು ಉಪಕೃತನು. ನಿಮ್ಮ ಪ್ರೇಮಕ್ಕೆ ಯಾವಾಗಲೂ ಪಾ ವಾಗಿರುವ ಭಾಗ್ಯವು ನನಗೆ ದೊರೆತರೆ ನಾನು ನಿಜವಾಗಿಯೂ ಭಾಗ್ಯಶಾ ಕಮಲಾಕ್ಷಾ, ನಾನೂ ನೀನೂ ಒಂದೇ ವರ್ಗದಲ್ಲಿಯ ಗೆಳೆಯರಲ್ಲವೆ ? ಗೆಳೆ ಗೆಳೆಯರಲ್ಲಿ ಮುಚ್ಚುಮರೆ ಇರಕೂಡದು. ನನ್ನೆಡೆಗೆ ನೀನು ಬಂದಿದ್ದರೆ ನಾ ಲೆಕ್ಕಗಳನ್ನು ತಿಳಿಸಿ ಹೇಳುತ್ತಿದ್ದೆನು, ನೋಡು. ನಿನ್ನ ತಪ್ಪಿಗಾಗಿ ಶಿಕ್ಷಕ ಎಂತಹ ಆಘಾತವಾಯ್ತು ! ಆದುದಾಯ್ತು, ಕಮಲಾಕ್ಷಾ, ಇನ್ನು ಮು ನೀನು ಹೀಗೆ ವರ್ತಿಸುವುದಿಲ್ಲವಷ್ಟೇ ?"

"ಯದುಪತೀ, ನಾನು ಅಪರಾಧಿ, ಮಹಾಪರಾಧಿ !" ಕಮಲಾಕ್ಷ ಕಂಬನಿಗರೆಯುತ್ತ ನುಡಿದನು, "ಇನ್ನು ಮುಂದೆ ನಾನು ಹೀಗೆ ವರ್ತ ಮಾಡೆನು. ನನ್ನ ಮಾತಿಗೆ ತಾತಯ್ಯನವರೂ ಗುರುಗಳೂ ಸಾಕ್ಷಿಯಾಗಿದ್ದಾ ತಾತಯ್ಯಾ, ನನ್ನನ್ನೂ ನೀವು ನಿಮ್ಮ ಯದುಪತಿಯಂತೆ ಭಾವಿಸಬೇ ಇದೊಂದು ಸಲ ನನ್ನ ಅಪರಾಧವನ್ನು ದಯೆಯಿಟ್ಟು ಕ್ಷಮಿಸಬೇಕು."

“ ಮಗು, ಈ ಪಶ್ಚಾತ್ತಾಪವು ನಿನ್ನನ್ನು ಒಳ್ಳೆಯವನನ್ನು ಮಾಡಲಿ. ಕಮಲಾಕ್ಷಾ, ನಾವು ಮನುಷ್ಯರಾಗಿ ಹುಟ್ಟಿದುದು ದೇವನತ್ತ ಒಂದು ಹೆಜ್ಜೆ ಯಾದರೂ ಮುಂದೆ ನಡೆಯಬೇಕೆಂದು. ಇತರ ಪ್ರಾಣಿಗಳಿಗೆ ಬುದ್ಧಿ ಶಕ್ತಿ ಇಲ್ಲ, ಮನುಷ್ಯನಿಗೆ ಉಂಟು. ಈ ಬುದ್ಧಿಶಕ್ತಿಯನ್ನು ಯೋಗ್ಯವಾಗಿ ಉಪ ಯೋಗಿಸಿಕೊಂಡರೆ ನಮ್ಮನ್ನು ಅದು ದೇವನ ಪಾದದೆಡೆಗೆ ಒಯ್ಯುವುದು. ಅದನ್ನು ದುರುಪಯೋಗಿಸಕೊಂಡರೆ ಎಲ್ಲಿಯೋ ಗುಂಡಿಯಲ್ಲಿ ನಮ್ಮನ್ನು ಅದು ಕೆಡಹುವುದು. ಬಳಿಕ ನಮ್ಮ ಸ್ಥಿತಿ ‘ ತೋಳ ಗುಂಡಿಗೆ ಬಿದ್ದರೆ ಆಳಿಗೊಂದು ಕಲ್ಲು, ’ ಎಂಬ ಗಾದೆಯಂತೆ ಕಷ್ಟಮಯವಾಗುವುದು. ನೀನು ಇನ್ನು ಒಳ್ಳೆಯವನಾಗಯ್ಯ, ” ಎಂದು ಭಟ್ಟರು ಕಮಲಾಕ್ಷನಿಗೆ ನುಡಿದು ಶಿಕ್ಷಕರ ಕಡೆಗೆ ತಿರುಗಿ ಎಂದರು, “ ರಾಯರೆ, ಯದುಪತಿ ಅಪರಾಧಿಯೆಂದು ವರ್ಗ ದಲ್ಲಿಯ ಹುಡುಗರು ಈಗ ತಿಳಿದಿರುವರು. ಅವರು ನಿಜವಾದ ಸಂಗತಿಯನ್ನು ಅರಿಯಬೇಕು, ಅಲ್ಲವೆ ?”

“ ಅಹುದು. ನಾಳೆ ನನ್ನ ಅವಧಿಯಲ್ಲಿ ನಾನು ನಿಜವಾದ ಸಂಗತಿ ಯನ್ನು ತಿಳಿಸುವೆನು. ಕಮಲಾಕ್ಷಾ, ಹುಡುಗರ ಮುಂದೆ ನಿನ್ನ ತಪ್ಪನ್ನು ಒಪ್ಪಿಕೊಳ್ಳುವೆಯಷ್ಟೇ ?”

“ ಒಪ್ಪಿಕೊಳ್ಳುವೆನು, ಸ್ವಾಮೀ, ಮತ್ತು ನಿರ್ಮಲನಾಗುವೆನು. ”

“ ಈಗಾಗಲೆ ನೀನು ನಿರ್ಮಲನಾಗಿರುವೆ, ಕಮಲಾಕ್ಷಾ. ಹುಡುಗರ ಮುಂದೆ ನೀನು ತಪ್ಪನ್ನು ಒಪ್ಪಿಕೊಂಡರೆ ಸತ್ಪಥದಲ್ಲಿ ನಡೆಯಲು ನಿನಗೆ ಸಾಮರ್ಥ್ಯವು ಬರುವುದು, ” ಯದುಪತಿ ಎಂದರು.

“ ಇನ್ನು ನಾನು ಹೋಗಲಾ ? ನನಗೆ ಶಾಲೆಯಲ್ಲಿ ಕೆಲಸವಿದೆ, ” ಶಿಕ್ಷಕರು ಭಟ್ಟರ ಕಡೆಗೆ ನೋಡುತ್ತ ಎಂದನು.

“ ಹೋಗಬಹುದು. ಇನ್ನೂ ಬಿಡುವು ಎಷ್ಟು ಹೊತ್ತು ಇದೆ ?” ಭಟ್ಟರು ಎಂದರು.

“ ಇನ್ನೂ ಅರ್ಧಗಂಟೆ ಬಿಡುವು ಇದೆ. ನಾನು ಹೊರಡುವೆನು, ನಮಸ್ಕಾರ, ” ಎಂದು ನುಡಿದು ಶಿಕ್ಷಕರು ಹೋದರು.

“ ನಾನೂ ಹೊರಡಬಹುದೆ ?” ಕಮಲಾಕ್ಷನು ಎಂದನು.

" ಹೋಗುವೆಯಂತೆ, ತಡೆ. ನಾನು ಗಿಣ್ಣವನ್ನು ತಂದಿರುವೆನು. ಯದುಪತಿಯೂ ನೀನೂ ಕೂಡಿ ತಿನ್ನುವಿರಂತೆ. ಯದುಪತೀ, ಇಂದು ನೀನು ಸಾವಿತ್ರಿಯ ಮನೆಗೆ ಹೋಗಿರಲಿಲ್ಲವಂತೆ. ಅವಳ ಹಸು, ಕಾಲಿಂದಿ, ಇಂದು ಬೆಳಗಿನಲ್ಲಿ ಈದಿದೆ. ಗಿಣ್ಣವನ್ನು ಮಾಡಿ ಅವಳು ನಿನಗೋಸುಗ ಕಾಯ್ದುಳಂತೆ ನೀನು ತಿಂದ ಬಳಿಕ ಅವಳು ತಿನ್ನುವಳಂತೆ. "

" ತಾತಯ್ಯಾ, ಅಕ್ಕನದೊಂದು ರೀತಿಯೆ ! ಮೊನ್ನೆ ಎಳ್ಳೂರಿಗೆಯನ್ನು ಮಾಡಿದ್ದಳು. ನಾನು ಅವಳಲ್ಲಿ ಮಧ್ಯಾಹ್ನಕ್ಕೆ ಅಂದು ಹೋಗಿರಲಿಲ್ಲ. ಬೀರಣ್ಣನು ಈ ಬಿಡುವಿನಲ್ಲಿ ನನಗೆ ಊರಿಗೆಯನ್ನು ತಂದುಕೊಡಬೇಕಾಯ್ತು. ಆ ಬಳಿಕ ಅವಳು ಉಂಡಳಂತೆ. ತಾತಯ್ಯಾ, ನನಗೋಸುಗ ಅವಳು ಹೀಗೆ ಉಪವಾಸವಿರಬೇಕೆ ? ಹೀಗೆ ಮಾಡಕೂಡದೆಂದು ನೀವಾದರೂ ಅವಳಿಗೆ ಹೇಳಿರಿ. ನೀವು ಗಿಣ್ಣವನ್ನು ತಿಂದಿರಾ ?"

" ನಾನು ತಿನ್ನುವುದಿಲ್ಲ, ಮಗು. ಹಸು ಈದು ಹತ್ತು ದಿನಗಳು ಆಗುವ ವರೆಗೆ ಅದರ ಹಾಲು ನನಗೆ ನಿಷಿದ್ಧ. "

" ಗುರುಗಳ ಮನೆಗೆ ಹಾಲು ಹೋಗಿದೆಯಷ್ಟೆ ?"

" ಆಚಾರ್ಯರ ಮನೆಗೆ ಮತ್ತು ಪುರುಷೋತ್ತಮರಾಯರ ಮನೆಗೆ ಬೀರಣ್ಣನು ಹಾಲನ್ನು ಕೊಟ್ಟು ಬಂದಿದ್ದಾನೆ. ಈಗ ನೀವಿಬ್ಬರೂ ಹೋಗಿ ಕೈಕಾಲುಗಳನ್ನು ತೊಳೆದುಕೊಂಡು ಬೇಗ ಬನ್ನಿರಿ. "

ಯದುಪತಿ ಮತ್ತು ಕಮಲಾಕ್ಷನು ನಲ್ಲಿಯ ಮೇಲೆ ಹೋಗಿ ಕೈ ಕಾಲುಗಳನ್ನು ತೊಳೆದುಕೊಂಡು ಬಂದರು. ಭಟ್ಟರು ಸಣ್ಣ ಚೀಲದೊಳಗಿಂದ ಡಬ್ಬಿಯನ್ನು ಹೊರಗೆ ತೆಗೆದು ಅದನ್ನು ತೆರೆದು ಗಿಣ್ಣದ ನಾಲ್ಕು ನಾಲ್ಕು ವಡೆಗಳನ್ನು ಮುತ್ತಲೆಲೆಯ ಮೇಲಿಟ್ಟು ಅವರಿಗೆ ಕೊಟ್ಟರು. ಅವರು ತಿನ್ನತೊಡಗಿದರು. ಭಟ್ಟರು ಕಮಲಾಕ್ಷನಿಗೆ ಎಂದರು, " ಕಮಲಾಕ್ಷಾ, ನಿನ್ನ ತಂದೆ ಏನು ಮಾಡುತ್ತಾರಯ್ಯಾ ?"

" ಅವರು ಒಂದು ಇಂಗ್ಲಿಶ್ ಕಂಪನಿಯಲ್ಲಿ ಮುಖ್ಯ ಸಂಚಾಲಕರಾಗಿದ್ದಾರೆ. "

" ಅವರ ಹೆಸರು ?"

13

“ಮುಪ್ಪ್ರರು ಕೆಲಸಗಿರಿಗಾಮರು.”

“ನಿನಗೆ ಅಣ್ಣತಮ್ಮಂದಿರೂ ಅಕ್ಕತಂಗಿಯರೂ ಎಷ್ಟು ಮಂದಿ ?”

“ನನಗೆ ಒಬ್ಬ ತಂಗಿ ಇರುವಳು.”

“ಸರಿ. ಕಮಲಾಕ್ಷಾ, ನೀನು ಒಳ್ಳೆಯವನಾಗಿರಯ್ಯಾ.”

“ಹಾಗೆ ಯದುಪತಿಗೆ ನಾನು ವಚನವಿತ್ತಿರುವೆನಲ್ಲವೆ ? ತಾತಯ್ಯಾ, ಯದುಪತಿಗೆ ನನ್ನನ್ನು ತನ್ನ ಗೆಳೆಯನನ್ನು ಮಾಡಿಕೊಳ್ಳಲು ಹೇಳುವಿರಾ ? ನನಗೆ ಉಪಕಾರವಾಗುವುದು. ಗಣಿತವಿಷಯದಲ್ಲಿ ನಾನು ಬಹು ದುರ್ಬಲನು. ಯದುಪತಿ ಬಲಿಷ್ಠನು. ಆತನ ಸಾಹಾಯ್ಯವು ನನಗೆ ದೊರೆಯಬಹುದೆ ?”

“ಆತನ ಸಾಹಾಯ್ಯವು ನಿನಗೆ ಏಕೆ ದೊರೆಯಬಾರದು ? ಆತನು ಅವಶ್ಯವಾಗಿ ನಿನ್ನ ಗೆಳೆಯನಾಗುವನಯ್ಯಾ. ಆತರೆ ಆತನು ಬಡವನೆಂದು ನೀನು ಆತನನ್ನು ತಿರಸ್ಕರಿಸವುದಿಲ್ಲವಷ್ಟೇ ? ನೀನು ಸಿರಿವಂತನಾಗಿ ತೋರುವೆ.”

“ಆದರೆ, ತಾತಯ್ಯಾ, ಎಲ್ಲ ಶಿಕ್ಷಕರಿಗೆ ಆತನ ವಿಷಯದಲ್ಲಿ ಎಷ್ಟು ಪ್ರೇಮವಿರುತ್ತದೆ ! ಆತನು ಬುದ್ಧಿವಂತನು ಮತ್ತು ಸದ್ಗುಣಿ. ಯದುಪತಿ ನನ್ನ ಗೆಳೆಯನಾಗಲು ಒಪ್ಪಿದರೆ, ಅದು ನನ್ನ ಭಾಗ್ಯವೆಂದು ತಿಳಿಯುತ್ತೇನೆ.”

“ಹಾಗಾದರೆ, ನಿವಿಬ್ಬರೂ ಇಂದಿನಿಂದ ಗೆಳೆಯರಾಗಿರುವಿರಿ. ಯದುಪತೀ, ಕಮಲಾಕ್ಷನಿಗೆ ಗಣಿತವಿಷಯವನ್ನು ಹೇಳಿಕೊಡಯ್ಯಾ.”

“ಕಮಲಾಕ್ಷಾ, ಇಂದಿನಿಂದ ನೀನೂ ನನ್ನಂತೆ ತಾತಯ್ಯನ ಮೊಮ್ಮಗನು. ನಾವಿಬ್ಬರೂ ಬಂಧುಗಳು.”

“ನಾನು ಧನ್ಯನು, ಯದುಪತೀ ! ಇಂದಿನಿಂದ ನಾವಿಬ್ಬರೂ ತಾತಯ್ಯನ ಮೊಮ್ಮಕ್ಕಳು, ನಾವಿಬ್ಬರೂ ಬಂಧುಗಳು ! ತಾತಯ್ಯಾ, ನಮ್ಮ ಮಿತ್ರತ್ವವು ಅಭೇದ್ಯವಾಗಿರಲೆಂದು ಹರಸಿರಿ.”

“ಮಕ್ಕಳಿರಾ, ದೇವನು ನಿಮ್ಮಿಬ್ಬರನ್ನೂ ದೊಡ್ಡವರನ್ನು ಮಾಡಲಿ!”

ಯದುಪತಿಯೂ ಕಮಲಾಕ್ಷನೂ ಕೈಮುಗಿದು ತಲೆಬಾಗಿದರು. ಶಾಲೆಯ ಗಂಟೆ ಬಾರಿಸಿತು.

“ಗಂಟೆಯಾಯ್ತು, ಇನ್ನು ಹೊರಡಿರಿ,” ಭಟ್ಟರು ಎಂದರು.

ಯದುಪತಿ ಮತ್ತು ಕಮಲಾಕ್ಷನು ಒಬ್ಬರೊಬ್ಬರ ಕೈ ಹಿಡಿದುಕೊಂಡು ತಮ್ಮ ವರ್ಗದತ್ತ ನಡೆದರು. ಅವರನ್ನು ಪ್ರೇಮಪೂರ್ವಕವಾಗಿ ನೋಡುತ್ತಿದ್ದ ಭಟ್ಟರ ಮುಖದ ಮೇಲೆ ಹೂನಗೆ ಕಂಗೊಳಿಸಿತು.

* * * *

## ೧೩

ಗಣಿತ ಶಿಕ್ಷಕರು ಭಟ್ಟರಿಗೆ ಹೇಳಿದಂತೆ ಮರುದಿನ ವರ್ಗದಲ್ಲಿ ನಿಜವಾದ ಸಂಗತಿಯನ್ನು ತಿಳಿಸಿ ಯದುಪತಿಯು ತಪ್ಪಿರಲಿಲ್ಲವೆಂದೂ ಸರಿಯಾಗಿ ವಿಚಾರಮಾಡದೆ ಆತನನ್ನು ಸುಳ್ಳುಗಾರರಲ್ಲಿ ಎಣಿಸಿದುದು ತಮ್ಮ ತಪ್ಪಾಯಿತೆಂದೂ ಹೇಳಿ, ಕೋಪಕ್ಕೆ ವಶನಾದಾಗ ಮನುಷ್ಯನಿಂದ ಪ್ರಮಾದಗಳು ಹೇಗೆ ಘಟಿಸುವುವೆಂಬುದನ್ನು ವಿವರಿಸಿ, ಕಮಲಾಕ್ಷನು ವರ್ಗದ ಹುಡುಗರ ಮುಂದೆ ತನ್ನ ತಪ್ಪನ್ನು ಒಪ್ಪಿಕೊಳುವೆನೆಂದು ವಚನವಿತ್ತಿರುವನೆಂದು ತಿಳಿಸಿದರು. ಮನುಷ್ಯನು ನಿರ್ಮಲನಾಗಿರಲು ಸಂಕಲ್ಪಿಸಿ, ಮಾಡಿದ ತಪ್ಪುಗಳನ್ನು ಒಪ್ಪಿಕೊಳ್ಳಲು ನಿಶ್ಚಯಿಸಿದರೆ ಅವನಿಗೆ ವಿಲಕ್ಷಣವಾದ ಧೈರ್ಯವು ಬರುವುದು. ಧೈರ್ಯದ ಜೊತೆಯಲ್ಲಿ ವಿನಯವೂ ಬರುವುದು. ಸತ್ ಸಂಕಲ್ಪವು. ಧೈರ್ಯವು ಮತ್ತು ವಿನಯವು ಹೀಗೆ ಒಂದೆಡೆಯಲ್ಲಿ ಸೇರಿದರೆ ತ್ರಿವೇಣೀಸಂಗಮದ ಸೌಂದರ್ಯವು ಮತ್ತು ಸೌಭಾಗ್ಯವು ಜೀವನದಲ್ಲಿ ಪ್ರಾಪ್ತವಾಗುತ್ತವೆ. ಕಮಲಾಕ್ಷನು ತಾನು ಮಾಡಿದ ತಪ್ಪನ್ನು ವಿವರವಾಗಿ ವರ್ಣಿಸಿ ಇನ್ನು ಮುಂದೆ ಅಂತಹ ಅನುಚಿತವು ತನ್ನಿಂದಾಗದಂತೆ ಎಚ್ಚರಿಕೆಯಿಂದ ಇರುವೆನೆಂದು ಹೇಳಿ, ವರ್ಗದಲ್ಲಿಯ ಗೆಳೆಯರೆಲ್ಲರು ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ವಿನಯದಿಂದ ಬೇಡಿಕೊಂಡನು. ವರ್ಗದ ವಿದ್ಯಾರ್ಥಿಗಳೆಲ್ಲರು ಅಂತಃಕರಣಪೂರ್ವಕವಾಗಿ ಕಮಲಾಕ್ಷನನ್ನು ಕ್ಷಮಿಸಿ ತಮ್ಮ ವರ್ಗವನ್ನು ಆದರ್ಶವರ್ಗವಾಗಿ ಮಾಡಲು ನಿಶ್ಚಯಿಸಿದರು. ಬೀಳುತ್ತ ಮುನ್ನಡೆಯಲು ಕಲಿವುದು ಬಾಲ್ಯಾವಸ್ಥೆಯಲ್ಲಿಯ ಮಗು. ಮಾನವಜಾತಿ ಇನ್ನೂ ಬಾಲ್ಯಾವಸ್ಥೆಯಲ್ಲಿ ಇದೆ.

ನಾಲ್ಕು ತಿಂಗಳುಗಳು ಹೋದುವು. ಯದುಪತಿಕಮಲಾಕ್ಷರ ಸ್ನೇಹವು ದೃಢವಾಯ್ತು. ಯದುಪತಿಯ ಸಾಧುಶೀಲವು ಮತ್ತು ಆತನ ಕುಶಾಗ್ರ ಬುದ್ಧಿ ಕಮಲಾಕ್ಷನ ಅಂತಃಕರಣವನ್ನು ಬಲವಾಗಿ ಸೆಳೆದುವು. ಇಬ್ಬರೂ ಜೀವದ ಗೆಳೆಯರಾದರು. ಈ ಮಿತ್ರತ್ವವು ಕಮಲಾಕ್ಷನ ಸ್ವಭಾವದಲ್ಲಿ ಒಳಿತಾದ ಮಾರ್ಪಾಟವನ್ನು ಮಾಡಿತು. ನಿಯಮಿತ ತನವು ಅವನಲ್ಲಿ ಮನೆ ಮಾಡಿತು. ಅವನ ನಡೆನುಡಿಗಳು ವಿನಯದಿಂದ ಆಕರ್ಷಕವಾದುವು. ಆಲಸ್ಯವು ಅವನಿಂದ ದೂರ ಸರಿಯಿತು. ಮಿತವ್ಯಯದ ರೀತಿ ಅವನಿಗೆ ಗೊತ್ತಾಯ್ತು. ಅನ್ಯಾಯವು ಅವನಿಂದ ಸಹಸಾ ಆಗುತ್ತಿರಲಿಲ್ಲ. ಅಸಭ್ಯತೆ ಅವನನ್ನು ಸಂಪೂರ್ಣವಾಗಿ ತೊಲಗಿತು. ಒಂದು ಮಾತಿನಲ್ಲಿ ಹೇಳುವೆನು. ಅವನು ವಿವೇಕಿಯಾದನು. ಯದುಪತಿ ತಾನು ತಿಳಿದ ಮಟ್ಟಿಗೆ ಅವನಿಗೆ ಗಣಿತ ವಿಷಯದ ರಹಸ್ಯವನ್ನು ತಿಳಿಸಿದನು. ವರ್ಗದ ಅಭ್ಯಾಸದಲ್ಲಿ ಅವನು ವೇಗದಿಂದ ಮುಂದುವರಿದನು. ಮಗನ ನಡೆನುಡಿಗಳಲ್ಲಿ ಉಂಟಾದ ಶುಭಪರಿವರ್ತನವನ್ನು ಕಂಡು ಶೇಷಗಿರಿರಾಯರು ಹಿಗ್ಗಿದರು. ಈ ಪರಿವರ್ತನದಿಂದ ಅವರ ಮನೆಯ ವಾತಾವರಣವೂ ತಿಳಿಯಾಗತೊಡಗಿತು. ಶಾರದಾಬಾಯಿಯ ಸ್ವಭಾವದಲ್ಲಿ ಸೌಮ್ಯತೆ ಕಾಣಿಸಿಕೊಂಡಿತು. ಮಾಧುರ್ಯವು ತಲೆದೋರಿತು. ಇಷ್ಟು ದಿನ ಅವರು ಕಮಲಾಕ್ಷನನ್ನು ಮಗನೆಂದು ಪ್ರೀತಿಸುತ್ತಿದ್ದರು. ಈಗ ಅವರು ಪ್ರೀತಿಸುತ್ತಿದ್ದುದು ಮಗನು ಗುಣವಂತನೆಂದು. ಇಂದಿನ ಅವರ ಪ್ರೀತಿ ಜೇನು ಬೆರೆತ ಹಾಲಿನಂತೆ ಇದ್ದಿತು. ಇಷ್ಟುದಿನ ಮಗನಿಗೆ ಬರಿಯ ಹಾಲನ್ನು ಕುಡಿಸಿದರು, ಈಗ ಜೇನನ್ನು ಬೆರೆಯಿಸಿ ಕುಡಿಯಿಸಲಾರಂಭಿಸಿದರು. ಗುಣಗ್ರಾಹಕತೆ ಗುಣಗ್ರಾಹಿಯನ್ನು ಗುಣಿಯಾಗಿಸುತ್ತದೆ. ಮಗನಲ್ಲಿ ದೃಢ ಮೂಲವಾಗುತ್ತಿದ್ದ ಸದ್ಗುಣಗಳು ತಾಯಿಯಲ್ಲಿಯೂ ತಲೆದೋರಲಾರಂಭಿಸಿದುವು.

ಒಂದು ದಿನ ಶೇಷಗಿರಿರಾಯರು ಕೆಲಸದಿಂದ ದಿನಕ್ಕಿಂತ ಬೇಗನೆ ಮನೆಗೆ ಬಂದರು. ಶಾರದಾಬಾಯಿ ಒಳಗಿನಿಂದ ಬಂದು, "ಏನು, ಇಂದು ಬೇಗನೆ ಬಂದಿರಲ್ಲ ?" ಎಂದರು.

"ಇಂದು ಕಮಲಾಕ್ಷನ ಪೂರ್ವಪರೀಕ್ಷೆಯ ಪರಿಣಾಮವು ಇದ್ದಿತಲ್ಲವೆ ? ನಾಲ್ಕು ಗಂಟೆಗೆ ಹೇಳಿದರು. ಅದನ್ನು ಕೇಳಿಕೊಂಡು ನೇರವಾಗಿ ಮನೆಗೆ ಬಂದೆನು."

" ಪರಿಣಾಮವು ಏನಾಗಿದೆ ?''

" ಕಮಲಾಕ್ಷನು ಎಲ್ಲ ವಿಷಯುಗಳಲ್ಲಿಯೂ ಚೆನ್ನಾಗಿ ಮಾಡಿರುವನು. ಅವನಿಗೆ ನೂರಕ್ಕೆ ಎಪ್ಪತ್ತರಷ್ಟು ಗುಣಗಳು ದೊರೆತಿವೆ. ಆರು ತಿಂಗಳ ಪರೀಕ್ಷೆಯಲ್ಲಿ ಅವನ ಗಣಿತ ವಿಷಯವು ಕೆಟ್ಟದ್ದಿತು. ಈಗ ಅದರಲ್ಲಿಯೂ ನೂರಕ್ಕೆ ಎಪ್ಪತ್ತೈದು ಗುಣಗಳನ್ನು ಅವನು ಪಡೆದಿರುವನು, ಹುಡುಗನು ಮನಸ್ಸಿಗೊಟ್ಟು ಅಭ್ಯಾಸಮಾಡಿದ್ದಾನೆ, ನೋಡು.''

" ಈಗ ಅವನು ಗುಣವಂತನೂ ಆಗಿದ್ದಾನೆ. ಮೊದಲಿನ ಅವನ ಸಿಡುಕು ಈಗ ಇಲ್ಲ. ಯಾವಾಗಲೂ ನಗುತ್ತಲೆ ಇರುವನು. ನಸುಕಿನಲ್ಲಿ ತಪ್ಪದೆ ಎದ್ದು ಓದುವನು. ಸ್ನಾನವಿಲ್ಲದೆ ಏನನ್ನೂ ತಿನ್ನುವುದಿಲ್ಲ. ಈ ನಾಲ್ಕು ತಿಂಗಳುಗಳಲ್ಲಿ ಒಂದು ದಿನವೂ ಅವನು ಶಾಲೆಯನ್ನು ತಪ್ಪಿಸಿಲ್ಲ. ಮೊದಲಿನ ಆ ಕೆಟ್ಟಕೆಟ್ಟ ಹುಡುಗರು ಈಗ ನಮ್ಮ ಮನೆಗೆ ಬರುವುದಿಲ್ಲ.''

" ಅಹುದು ನೋಡು. ಆಗ ಪ್ರತಿತಿಂಗಳೂ ಅವನು ಹದಿನೈದು ಇಪ್ಪತ್ತು ರೂಪಾಯಿಗಳವರೆಗೆ ಅದಕ್ಕೆ ಇದಕ್ಕೆ ಎಂದು ಹಾಳು ಮಾಡುತ್ತಿದ್ದನು. ಈ ಮೂರು ನಾಲ್ಕುತಿಂಗಳುಗಳಲ್ಲಿ ನಾಲ್ಕೈದು ಬಡಹುಡುಗರನ್ನು ನನ್ನೆಡೆಗೆ ಕರೆತಂದು ಅವರ ಫೀಗೆಂದು ಎಂಟುಹತ್ತು ರೂಪಾಯಿಗಳನ್ನು ನನ್ನಿಂದ ಕೊಡಿಸಿರುವನು, ಇಷ್ಟೇ. ಎಷ್ಟೊಂದು ಮಾರ್ಪಾಟು ಆಗಿದೆ ಅವನ ಜೀವನದಲ್ಲಿ ! ತನ್ನ ಕೋಣೆಯನ್ನು ತಾನೇ ಉಡುಗಿಕೊಂಡು ಹಸನಾಗಿ ಇಟ್ಟುಕೊಂಡಿದ್ದಾನೆ ಮನೆಯ ಮುಂದಿನ ತೋಟವು ಅವನ ಪರಿಶ್ರಮದಿಂದ ಎಷ್ಟು ಚೆಂದವಾಗಿದೆ ನೋಡು. ಇದೆಲ್ಲ ಮಾರ್ಪಾಟಿಗೆ ಕಾರಣವೇನಿರಬಹುದು ?''

" ಒಬ್ಬ ಗುಣವಂತನ ಸಂಗತಿ ಅವನಿಗೆ ದೊರೆತಂತೆ ತೋರುತ್ತಿದೆ. ಯಾವನಿರಬಹುದು ಆತನು ? ಒಮ್ಮೆಯೂ ಆತನು ನಮ್ಮ ಮನೆಗೆ ಬಂದಿಲ್ಲ. ಆತನು ಯಾವನೇ ಇರಲಿ, ನನ್ನ ಮಗನನ್ನು ಗುಣವಂತನನ್ನು ಮಾಡಿ ನಮಗೆ ಬಹು ಉಪಕಾರವನ್ನು ಮಾಡಿದ್ದಾನೆ. ಆತನು ಉದ್ದಂಡ ಆಯುಷ್ಯವಂತನಾಗಲಿ !''

ಕಮಲಾಕ್ಷನ ಧ್ವನಿ ಕೇಳಿಸಿತು. ಗಂಡಹೆಂಡಿರು ಮಾತನ್ನು ನಿಲ್ಲಿಸಿ ಹೊರಗೆ ಹಣಿಕಿ ನೋಡಿದರು. ಕಮಲಾಕ್ಷನು ಒಳಗೆ ಬಂದನು, ಮತ್ತು ತಂದೆಗೆ ಎಂದನು, " ಅಪ್ಪಾ, ಒಂದು ಮಾತನ್ನು ಕೇಳಲಾ ?''

" ಏನು, ಮಗು, ನಿನಗೆ ಏನು ಬೇಕು ?"

" ನಮ್ಮ ವರ್ಗದಲ್ಲಿ ಶಂಕರನೆಂಬವನೊಬ್ಬನು ನನ್ನ ಗೆಳೆಯನಿದ್ದಾನೆ. ನೂ ಪೂರ್ವಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದಾನೆ. ಅವನು ಬಡವನು, ಕ್ಷೆಗೆ ಕಟ್ಟಲು ಅವನಿಗೆ ಹದಿನೈದು ರೂಪಾಯಿಗಳು ಬೇಕಾಗಿವೆ. ಉಳಿದು , ಅವನು ಕೂಡಿಸಿರುವನು. ನಿಮ್ಮಿಂದೆ ಅವನಿಗೆ ಏನಾದರೂ ದೊರೆಯು ುದೆ ? ಅವನು ಹೊರಗೆ ಕುಳಿತಿದ್ದಾನೆ."

" ಅವನು ಒಳ್ಳೆಯ ಹುಡುಗನಷ್ಟೇ ?"

" ಅಪ್ಪಾ, ನಮ್ಮ ವರ್ಗದಲ್ಲಿ ಕೆಟ್ಟವರಾರೂ ಇಲ್ಲ. ಶಂಕರನು ಬಲು ಯುವನು."

" ಅವನನ್ನು ಒಳಗೆ ಕರೆ, ಮಗು."

ಕಮಲಾಕ್ಷನು ಶಂಕರನನ್ನು ಒಳಗೆ ಕರೆತಂದನು. ಶಂಕರನು ವಿನಯ ತ ನಮಸ್ಕಾರಮಾಡಿ ನಿಂತನು.

" ಕುಳಿತುಕೊಳ್ಳು, ಶಂಕರಾ. ನಿನಗೆ ಇನ್ನೂ ಎಷ್ಟು ಬೇಕಯ್ಯಾ ವು ?" ಶೇಷಗಿರಿರಾಯರು ಕೇಳಿದರು.

" ಸ್ವಾಮಿ, ಹದಿನೈದು ರೂಪಾಯಿಗಳು ಬೇಕು."

" ಇವನ್ನು ತೆಗೆದುಕೊಳ್ಳು. ಹದಿನೈದು ರೂಪಾಯಿಗಳು ಇವೆ. ಾಗಿ ಅಭ್ಯಾಸಮಾಡಯ್ಯಾ, ಪರೀಕ್ಷೆಯಲ್ಲಿ ನೀನು ಉತ್ತೀರ್ಣನಾಗಬೇಕು. ಣಾಮವು ಗೊತ್ತಾದ ಬಳಿಕ ಬಂದು ನನಗೆ ಭೆಟ್ಟಿಯಾಗುವೆಯಾ ?"

" ಸ್ವಾಮೀ, ತಮ್ಮ ಉಪಕಾರವನ್ನು ಮರೆಯೆನು. ಚೆನ್ನಾಗಿ ಅಭ್ಯಾಸ ಡಿ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ತಮ್ಮನ್ನು ಕಾಣುವೆನು," ಎಂದು ರನು ಹಣವನ್ನು ತೆಗೆದುಕೊಂಡನು, ಮತ್ತು ನಮಸ್ಕಾರಮಾಡಿ ಹೊರಡ ಂದಿದ್ದನು. ಅಷ್ಟರಲ್ಲಿ ಶಾರದಾಬಾಯಿ ಅವನಿಗೆ ಎಂದರು,—"ಶಂಕರಾ, , ತಡೆ. ಕಮಲಾಕ್ಷನೊಡನೆ ಉಪಾಹಾರವನ್ನು ತೆಗೆದುಕೊಂಡು ಹೋಗುವೆ ತೆ. ಅವನು ಮಧ್ಯಾಹ್ನದ ಊಟವಾದ ಬಳಿಕ ಈವರೆಗೆ ಏನನ್ನೂ ಲ್ಲ. ನೀನೂ ತಿಂದಿರಲಿಕ್ಕಿಲ್ಲ. ನಿಮಗೆ ಪರೀಕ್ಷೆಯ ಪರಿಣಾಮವನ್ನು ುಕೊಳ್ಳಬೇಕೆಂಬ ಆತುರತೆ, ಮತ್ತು ಪರಿಣಾಮವು ಗೊತ್ತಾದ ಬಳಿಕ ಂದ ಈ ಆತುರತೆ-ಆನಂದಗಳಲ್ಲಿ ನಿಮಗೆ ಹಸಿವು ನೀರಡಿಕೆಗಳ ಅರಿವು

ಇಲ್ಲ;" ಹೀಗೆಂದು ಅವರು ಕಮಲಾಕ್ಷನಿಗೆ ಎಂದರು, "ಕಮಲಾಕ್ಷಾ, ಇಬ್ಬರೂ ಕೈಕಾಲುಗಳನ್ನು ತೊಳೆದುಕೊಂಡು ಬನ್ನಿರಿ."

ಕಮಲಾಕ್ಷನೂ ಶಂಕರನೂ ಕೈಕಾಲುಗಳನ್ನು ತೊಳೆದುಕೊಂಡು ಬಂದರು, ಮತ್ತು ಶಾರದಾಬಾಯಿ ಪ್ರೇಮದಿಂದಿತ್ತ ಉಪಾಹಾರವನ್ನು ತೆಗೆದುಕೊಂಡರು. ಬಳಿಕ ಶಂಕರನು ಶೇಷಗಿರಿರಾಯರಿಗೆ ಮತ್ತು ಶಾರದಾ ಬಾಯಿಗೆ ನಮಸ್ಕಾರಮಾಡಿ ಹೊರಹೋಟನು.

ಶಂಕರನು ಹೋದಬಳಿಕ ಶೇಷಗಿರಿರಾಯರು ಮಗನಿಗೆ ಎಂದರು, "ಕಮಲಾಕ್ಷಾ, ಆರು ತಿಂಗಳ ಪರಿಕ್ಷೆಯಲ್ಲಿ ನಿನ್ನ ಗಣಿತ ವಿಷಯವು ಸರಿಯಾಗಿರಲಿಲ್ಲ. ಆಗ ಇಪ್ಪತ್ತು ಮೂರುಗುಣಗಳು ಮಾತ್ರ ನಿನಗೆ ದೊರೆತಿದ್ದುವು. ಬೇರೆ ವಿಷಯಗಳಲ್ಲಿ ನೀನು ಹೆಸರಿಗೆ ಉತ್ತೀರ್ಣನಾಗಿದ್ದೆ. ಈಪೂರ್ವಪರೀಕ್ಷೆಯಲ್ಲಿ ನೀನು ಎಲ್ಲ ವಿಷಯಗಳಲ್ಲಿ ಚೆನ್ನಾಗಿ ಮಾಡಿರುವೆಯಲ್ಲದೆ ಗಣಿತದಲ್ಲಿ ನೂರಕ್ಕೆ ಎಪ್ಪತ್ತೈದು ಗುಣಗಳನ್ನು ಪಡೆದಿರುವೆ. ನನಗೆ ಬಹು ಆನಂದವಾಯ್ತು. ಇಷ್ಟೊಂದು ಪ್ರಗತಿಯನ್ನು ಮಾಡಲು ನಿನಗೆ ಹೇಗೆ ಶಕ್ಯವಾಯ್ತು, ಮಗು?"

"ಅಪ್ಪಾ, ಸನ್ಮಿತ್ರನೊಬ್ಬನನ್ನು ನಾನು ಸಂಪಾದಿಸಿದ್ದೇನೆ. ಆತನ ಸಾಹಾಯ್ಯದ ಫಲವು ಇದು."

"ಆತನು ಯಾರು, ಮಗನೆ?"

"ಆತನು ನಮ್ಮ ವರ್ಗದವನೇ. ಯದುಪತಿ ಆತನ ಹೆಸರು. ಆತನು ಬಹು ಬುದ್ಧಿವಂತನು, ಮತ್ತು ಅತ್ಯಂತ ಗುಣವಂತನು."

"'सत्सङ्गः शेवधिर्नृणाम्।' ಸತ್ಸಂಗವು ಮನುಷ್ಯರಿಗೆ ಸಂಪತ್ತಿನ ನಿಧಿ ಎಂದು ಸಜ್ಜನರು ಹೇಳುವುದು ಅಕ್ಷರಶಃ ಸತ್ಯವಾದುದು. ನಿನ್ನ ಆ ಸನ್ಮಿತ್ರನಿಗೆ ನಾನು ಋಣಿಯಾಗಿದ್ದೇನೆ, ಮಗನೆ. ಈ ನಾಲ್ಕು ತಿಂಗಳುಗಳಲ್ಲಿ ನಿನ್ನ ಸ್ವಭಾವದಲ್ಲಿಯೂ ಶುಭ ಪರಿವರ್ತನೆಯನ್ನು ಕಾಣುತ್ತಿದ್ದೇನೆ. ಇದೂ ಆತನಿಂದಲೇ ಅಲ್ಲವೆ?"

"ಅಹುದು, ಅಪ್ಪಾ, ಯದುಪತಿ ನನಗೆ ಮಾಡಿದ ಉಪಕಾರವು ಅಷ್ಟಿಷ್ಟಲ್ಲ. ಆತನು ನನ್ನನ್ನು ಬದುಕಿಸಿದ್ದಾನೆ. ಕೆಟ್ಟವರ ಸಂಗತಿಯಲ್ಲಿ ಬಿದ್ದು ನಾನು ಹಾಳಾಗುತ್ತಿದ್ದೆನು. ನನ್ನನ್ನು ಬದುಕಿಸಲು ದೇವನು ನನಗೆ

ಯದುಪತಿಯು ಸಹವಾಸವನ್ನು ದಯಪಾಲಿಸಿದನು. ಯದುಪತಿ ನನ್ನನ್ನು ಬದುಕಿಸಿದನು. ನಾನು ಏನುಮಾಡಿದರೂ ಆತನ ಉಪಕಾರವು ತೀರದು !" ಕಮಲಾಕ್ಷನ ಕಣ್ಣುಗಳಲ್ಲಿ ನೀರು ತುಂಬಿತು.

ಮಗನಲ್ಲಿ ಕೃತಜ್ಞತಾಭಾವನ ಬಲವತ್ತರವಾದುದನ್ನು ಕಂಡು ತಂದೆಯ ಅಂತಃಕರಣವು ತುಂಬಿ ಬಂದಿತು. ಮನುಷ್ಯನನ್ನು ಭಾಗ್ಯವಂತನನ್ನು ಮಾಡುವ ಗುಣವು ಯಾವುದಾದರೂ ಇದ್ದರೆ ಅದು ಕೃತಜ್ಞತೆಯೆ ಅಹುದು. ಮನುಷ್ಯನ ಹೃದಯುವನ್ನು ಶುದ್ಧಮಾಡಿ,ಅದನ್ನು ವಿಕಾಸಗೊಳಿಸಿ ಉನ್ನತವಾಗಿಸುವ ಮತ್ತು ಉದಾತ್ತವಾಗಿಸುವ ಸಾಮರ್ಥ್ಯವು ಕೃತಜ್ಞತೆಯಲ್ಲಿ ಉಂಟು. ಕೃತಜ್ಞತೆ ದೇವನ ಒಂದು ರೂಪು. नमस्तुभ्यं नमस्तुभ्यं नमस्तुभ्यं कृतज्ञते ।

ಶೇಷಗಿರಿರಾಯರು ಎಂದರು, " ಕಮಲಾಕ್ಷಾ, ಯದುಪತಿ ನಿನ್ನ ಮಿತ್ರನಾದುದು ಹೇಗೆ ?"

ಕಮಲಾಕ್ಷನು ಅಂದು ವರ್ಗದಲ್ಲಿ ನಡೆದ ಸಂಗತಿ ಮೊದಲಾಗಿ ಎಲ್ಲವನ್ನು ಹೇಳಿ ಎಂದನು, " ಅಪ್ಪಾ, ಯದುಪತಿಯ ಉಪಕಾರಕ್ಕೆ ಬೆಲೆ ಇರುವುದೆ ?"

" ಇಲ್ಲ, ಮಗು. ' ಆತನಿಗೆ ನಾನು ಋಣಿಯಾಗಿದ್ದೇನೆ, ' ಎಂದು ನಾನು ಹೇಳಿದುದು ಅದಕ್ಕೋಸುಗವೆ ? ತನ್ನ ಸದಾಚರಣದಿಂದ ಎರಡನೆಯವರಿಗೆ ಸದಾಚಾರದ ಮಹತ್ತ್ವವನ್ನು ತಿಳಿಸಿ ಅವರನ್ನು ಸದಾಚಾರದಲ್ಲಿ ನೆಲೆಗೊಳಿಸುವವನು ನಿಜವಾಗಿಯೂ ಮಹದುಪಕಾರಿ. ಆತನ ಉಪಕಾರಕ್ಕೆ ಬೆಲೆ ಇಷ್ಟೆಂದು ಹೇಳಲಾಗದು ಕಮಲಾಕ್ಷಾ, ನೀನೂ ಯದುಪತಿಯೂ ಈ ಬಗೆಯ ಗೆಳೆಯರಾಗಿದ್ದರೂ ಒಮ್ಮೆಯೂ ಆತನು ನಮ್ಮ ಮನೆಗೆ ಬಂದಿಲ್ಲವಲ್ಲ? ನೀನು ಕರೆದೇ ಇಲ್ಲವೊ ?"

" ಅಪ್ಪಾ, ಯದುಪತಿ ಉದ್ಯೋಗಿ. ಅನೇಕರಿಗೆ ಬೇಕಾದವನು. ಆತನಿಗೆ ಸಮಯವೇ ಸಾಲುವುದಿಲ್ಲ. ನಾನು ಎರಡು ಮೂರು ಸಲ ಕರೆದೆನು. ಆಗ ಆತನಿಗೆ ಅಗತ್ಯದ ಕೆಲಸವು. ಇದಲ್ಲದೆ, ಅಪ್ಪಾ, ಆತನಿಗೆ ನಮ್ಮಲ್ಲಿ ಬರಲು ಏಕೋ ಮನಸ್ಸಿಲ್ಲವೆಂಬಂತೆ ತೋರುತ್ತದೆ. ಈವೊತ್ತೇ ನಾನು, ಶಂಕರನು ಮತ್ತು ಆತನು ಕೂಡಿಯೆ ಮುರಲೀಧರನ ದರ್ಶನಕ್ಕೆ ಬಂದಿದ್ದೆವು. ' ಇಲ್ಲಿಯ ವರೆಗೆ ಬಂದಿರುವೆ, ಯದುಪತೀ, ನಮ್ಮ ಮನೆಗೆ ಬಂದು ಹೋಗು,'

ಎಂದು ಎಷ್ಟು ಹೇಳಿದರೂ ಆತನು, 'ಕ್ಷಮಿಸು, ಕಮಲಾಕ್ಷಾ, ಮತ್ತೆ ಯಾವಾಗಲಾದರೂ ಬರುವೆನಂತೆ,' ಎಂದನು. ಆಗ ಆತನ ಮುಖವು ಸಣ್ಣದಾಗಿದ್ದಿತು."

"ಮಗು, ಆತನ ತಂದೆ ಏನುಮಾಡುತ್ತಿರುವರು ?"

"ಆತನಿಗೆ ತಂದೆತಾಯಿಗಳು ಇಲ್ಲ."

"ಎಲ್ಲಿ ಊಟಮಾಡುವನು ?"

"ಮಾಧುಕರಿಮಾಡಿಕೊಂಡು ಇರುವನು."

"ಆತನು ಇರುವುದು ಯಾರಲ್ಲಿ ?"

"ಸಂಗೀತ ಮಾಧವಾಚಾರ್ಯರಲ್ಲಿ."

"ಬೇರೆ ಆಪ್ತೇಷ್ಟರು ಆತನಿಗೆ ಯಾರಾದರೂ ಇರುವರೆ ?"

"ನಾನು ಅರಿಯೆನು. ಮಾಧವಾಚಾರ್ಯರು ಇರುವ ಓಣಿಯಲ್ಲಿಯೆ ಒಂದು ಮನೆಯಲ್ಲಿ ಕುರುಬ ದಂಪತಿಗಳು ಇರುವರು. ಗಂಡಹೆಂಡಿರು ಬಲು ಒಳ್ಳೆಯವರು. ಬೀರಣ್ಣನು ಪುಸ್ತಕಗಳನ್ನು ಹೊಲಿವವ್ಯವಸಾಯವನ್ನು ಮಾಡುವನು. ಯದುಪತಿ ಅವನಿಗೆ ನೆರವಾಗುವನು. ಬೀರಣ್ಣನು ನನಗೂ ಸ್ವಲ್ಪ ಸ್ವಲ್ಪ ಆ ಕೆಲಸವನ್ನು ಕಲಿಸಿರುವನು. ಅಪ್ಪಾ, ಇದೋ ನೋಡಿರಿ. ನಾನು ಹೊಲಿದ ಪುಸ್ತಕವು," ಎಂದು ಹೇಳಿ ಕಮಲಾಕ್ಷನು ಒಳಗಿನಿಂದ ಒಂದು ಪುಸ್ತಕವನ್ನು ತಂದು ತಂದೆಗೆ ತೋರಿಸಿ, ಮತ್ತೆ ಎಂದನು, "ಬೀರಣ್ಣನ ಹೆಂಡತಿ ಸಾವಕ್ಕನು ಯದುಪತಿಗೆ ತಾಯಿಯಂತಿರುವಳು. ನನ್ನನ್ನೂ ಅವಳು ಪ್ರೀತಿಸುವಳು. ತಾಯಿಯ ಮಮತೆಯನ್ನು ಕಾಣುವುದಿದ್ದರೆ ಆ ಸಾಧ್ವಿಯಲ್ಲಿ ಕಾಣಬೇಕು! ಅಪ್ಪಾ, ಆ ಗಂಡಹೆಂಡಿರು ಆದರ್ಶಜೀವಿಗಳು. ಅವರ ಉದ್ಯೋಗಶೀಲತೆ, ನೈರ್ಮಲ್ಯ ಪ್ರೇಮ ಮತ್ತು ಸಾಧುವೃತ್ತಿ ಅನ್ಯಾದೃಶವಾಗಿರುವುದು. ಸಾವಕ್ಕನ ವಿಷಯದಲ್ಲಿ ಯದುಪತಿಗೆ ಎಷ್ಟೊಂದು ಭಕ್ತಿ ಇದೆ! ಆ ಭಕ್ತಿಯ ಒಂದು ಅಂಶವಾದರೂ ಅವ್ವನ ವಿಷಯದಲ್ಲಿ ನನಗೆ ಇರುವುದಾದರೆ ನಾನು ನನ್ನನ್ನು ಧನ್ಯನೆಂದು ಎಣಿಸುವೆನು. ಹಿಂದಿನ ನೂರಾರು ಜನ್ಮಗಳಲ್ಲಿ ಸಾವಕ್ಕನೂ ಯದುಪತಿಯೂ ತಾಯಿಮಕ್ಕಳಾಗಿದ್ದು ಈ ಜನ್ಮದಲ್ಲಿಯೆ ಯದುಪತಿ ಬೇರೆ ಹೊಟ್ಟೆಯಲ್ಲಿ ಹುಟ್ಟಿದನೆಂಬಂತೆ ತೋರುತ್ತದೆ. ಆತನು

ಈಗ ಬೇರೆ ಹೊಟ್ಟೆಯಲ್ಲಿ ಹುಟ್ಟಿ ಬಂದಿದ್ದರೂ ಹಿಂದಿನ ನೂರಾರು ಜನ್ಮಗಳ ಸಂಸ್ಕಾರವು ದೃಢವಾಗಿಯೆ ಉಳಿದಿದೆ. ಮೊನ್ನೆ ಸಂಸ್ಕೃತದ ವರ್ಗದಲ್ಲಿ ಶಿಕ್ಷಕರು ನಮಗೆ ಕವಿವರನ ಶಾಕುಂತಲದಲ್ಲಿಯ ಒಂದು ಶ್ಲೋಕದ ಅರ್ಥವನ್ನು ವಿವರಿಸಿದರು. 'भावस्थिराणि जननान्तर सौहृदानि ' ಎಂಬುದು ಆ ಶ್ಲೋಕದ ಕೊನೆಯ ಚರಣವು. ಶಿಕ್ಷಕರು ಅದರ ಅರ್ಥವನ್ನು ವಿವರಿಸುವಾಗ ಸಾವಕ್ಕನು ಮತ್ತು ಯದುಪತಿ ನನ್ನ ಕಣ್ಣ ಮುಂದೆ ಇದ್ದರು. "

" ಯದುಪತಿ ಸಂಗೀತ ಮಾಧವಾಚಾರ್ಯರಲ್ಲಿ ಇರುವನೆಂದು ನೀನು ಹೇಳಿದೆಯಲ್ಲವೆ ?"

" ಅಹುದು, ಯದುಪತಿ ಅವರಲ್ಲಿ ಇರುವನು. ಅವರೂ ಆತನನ್ನು ಮಗನಂತೆ ನೋಡುವರು. ಆತನಿಗೆ ಸಂಗೀತವನ್ನೂ ಅವರು ಕಲಿಸುತ್ತಿರುವರು. "

" ಯದುಪತಿಗೆ ಸಂಗೀತವೂ ಬರುತ್ತದೆಯೊ ?"

" ಅಪ್ಪಾ, ಆತನಿಗೆ ಸಂಗೀತವಿದ್ಯೆ ವಶವಾಗಿದೆ. ಆತನು ಹಾಡಿದರೆ ಆಚಾರ್ಯರೂ ಕೇಳುತ್ತ ಮೈಮರೆವರು. ಎಷ್ಟು ಸರಸವಾಗಿ ಹಾಡುವನು. "

" ಆತನು ಹಾಡುವುದನ್ನು ನೀನು ಕೇಳಿರುವೆಯಾ ?"

" ಎಷ್ಟೋ ಸಲ. ಹೋದ ತಿಂಗಳಲ್ಲಿ ಯದುಪತಿಯ ತಾಯಿಯ ಶ್ರಾದ್ಧದಿನವು ಬಂದಿತ್ತು. ಅಂದು ಸಂಜೆಯಲ್ಲಿ ಆತನು ತನ್ನ ತಾಯಿಯ ಭಾವಚಿತ್ರದ ಮುಂದೆ ಕುಳಿತು ' ಜನಸೇವೆ ಜೀವನದ ಸಾರ್ಥಕ್ಯವು ' ಎಂಬ ಹಾಡನ್ನು ಹಾಡಿದನು. ಎಷ್ಟು ಸವಿಯಾಗಿ ಹಾಡಿದನು! ಶಿಷ್ಯನ ಸಂಗೀತ ನೈಪುಣ್ಯವು ಆಚಾರ್ಯರನ್ನು ಆಶ್ಚರ್ಯಗೊಳಿಸಿತು. ಅಪ್ಪಾ, ಏನು ಸವಿ ಅದು! ಆ ಬಗೆಯ ಸವಿಯನ್ನು ಅನುಭವಿಸಿಯೆ ಸ್ಫೂರ್ತಿಗೊಂಡು ಕವಿ ಹಾಡಿದನಲ್ಲವೆ,—

' ತಿಂಗಳ ಬಿಂಬಮಂ ಹಿಡಿದು ಹಿಂಡೆ ಪಳಚ್ಚನೆ ಸೋರ್ವ ಸೋನೆಯಂ-
ತಿಂಗಡಲಿಂ ಪೊದಳ್ದಮರ್ದನೆತ್ತಿ ದೊಡೊಯ್ಯನೆ ಸೋರ್ವ ಸೋನೆಯಂ-
ತಂಗಜನಿಕ್ಷುಕಾರ್ಮುಕವನೇರಿಸೆ ಜುಮ್ಮನೆ ಸೋರ್ವ ಸೋನೆಯಂ-
ತೇಂ ಗಡ ಸೀಯನುಣ್ಮುವುದೊ ಗೇಯದ ಮೆಲ್ಲುಲಿ ಜಾಣ ಗಾಣನಾ!'

ಎಂದು ?"

" ಕಮಲಾಕ್ಷಾ, ಯದುಪತಿ ಪರೀಕ್ಷೆಯಲ್ಲಿ ನೂರಕ್ಕೆ ಎಷ್ಟು ಗುಣಗಳನ್ನು ಪಡೆದಿರುವನು ?"

" ಒಟ್ಟಿನಲ್ಲಿ ನೂರಕ್ಕೆ ತೊಂಬತ್ತು ನಾಲ್ಕು ಗುಣಗಳನ್ನು. ಗಣಿತದಲ್ಲಿ ನೂರಕ್ಕೆ ನೂರು, ಸಂಸ್ಕೃತದಲ್ಲಿ ನೂರಕ್ಕೆ ತೊಂಬತ್ತೇಳು ಗುಣಗಳು ಆತನಿಗೆ ದೊರೆತಿವೆ. "

" ನಿಜವಾಗಿಯೂ ಯದುಪತಿಯನ್ನು ಹೆತ್ತವರು ಮತ್ತು ಆತನನ್ನು ಈಗ ಸಂರಕ್ಷಿಸುತ್ತಿರುವವರು ಧನ್ಯರು !"

" ಅಪ್ಪಾ, ಯದುಪತಿಯ ಮಿತ್ರನಾಗಿರಲು ಅರ್ಹನಾಗಿರುವ ಭಾಗ್ಯವು ನನಗೆ ನಿರಂತರವೂ ಇರಲೆಂದು ಹರಸಿರಿ !"

" ತಥಾಸ್ತು, ಮಗನೇ !" ಶೇಷಗಿರಿರಾಯರು ಕಮಲಾಕ್ಷನ ತಲೆ ಬೆನ್ನುಗಳ ಮೇಲೆ ಕೈಯಾಡಿಸಿದರು.

ಯಾರೋ ಶೇಷಗಿರಿರಾಯರನ್ನು ಕಾಣಲು ಬಂದರು. ರಾಯರು ಹೊರಗೆ ಹೋದರು.

* * * *

## ೧೪

" ಕಮಲಾಕ್ಷಾ, ಎಷ್ಟೊಂದು ಆನಂದದ ಸುದ್ದಿ ! ಪರೀಕ್ಷೆಯಲ್ಲಿ ಉತ್ತೀರ್ಣರಾದವರಲ್ಲಿ ನಿನ್ನ ನಂಬರು ಎರಡನೆಯದೇ ? ಆರು ತಿಂಗಳ ಹಿಂದೆ ಇಂತಹ ಆನಂದನ ಸುದ್ದಿಯನ್ನು ಕೇಳುವೆನೆಂಬ ಆಶೆ ನನಗಿರಲಿಲ್ಲ. ಕೆಟ್ಟ ಹುಡುಗರ ಸಂಗತಿಯಿಂದ ನೀನು ಕೆಡಬಹುದೆಂದು ನನಗೆ ಹಗಲಿರುಳೂ ಆಗ ಆಗ ಚಿಂತೆ ! ದೇವರ ಕೃಪೆಯಿಂದ ನಿನಗೆ ಯದುಪತಿ ಗೆಳೆಯನಾಗಿ ದೊರೆತನು. ಇಂದಿನ ಈ ಆನಂದಕ್ಕೆ ಆತನು ಕಾರಣವಲ್ಲವೆ, ಮಗನೆ ?" ಮಗನು ಹೇಳಿದ ಮೆಟ್ರಿಕ್ ಪರೀಕ್ಷೆಯ ಪರಿಣಾಮದ ಸುದ್ದಿಯನ್ನು ಕೇಳಿ ಹರ್ಷಗೊಂಡು ಶಾರದಾಬಾಯಿ ಎಂದರು.

"ಅಹುದು, ಅವ್ವಾ, ಎಲ್ಲ ಬಗೆಯಿಂದಲೂ ಯದುಪತಿ ನನಗೆ ನೆರವಾದನು. ಆತನ ಸಹವಾಸವು ನನಗೆ ದೊರೆಯದೆ ಇದ್ದುದಾಗಿದ್ದರೆ, ಅವ್ವಾ,

ನೀನು ಈಗ ಎಂದಂತೆ ಕೆಟ್ಟ ಹುಡುಗರ ಸಂಗತಿಯಿಂದ ನಾನು ಕೆಟ್ಟು ಹೋಗುತ್ತಿದ್ದೆನು. ಶಾಲೆಬಿಟ್ಟು ನಾನು ಉಡಾಳನಾಗಿ ತಿರುಗುತ್ತಿದ್ದೆನೋ ಏನೋ? ಯದುಪತಿಯ ಸಹವಾಸದಿಂದ ವಿದ್ಯೆಯ ಮಹತ್ತ್ವವನ್ನು ಅರಿತೆನಲ್ಲದೆ, ಆತನ ಸಾಹಾಯ್ಯವು ದೊರೆತುದರಿಂದ ಶಾಲೆಯ ಅಭ್ಯಾಸದಲ್ಲಿ ಮುಂದುವರಿಯಲು ನನಗೆ ಅನುಕೂಲವಾಯ್ತು. ಎಲ್ಲ ಶಿಕ್ಷಕರೂ ಯದುಪತಿಯನ್ನು ಹೇಗೊ ಹಾಗೆ ನನ್ನನ್ನೂ ಪ್ರೀತಿಸುತ್ತಾರೆ. ಅವ್ವಾ, ಈಗ ನಾನು ಗುಣವಂತನಾಗಿರುವೆನಲ್ಲವೆ?''

"ಅಹುದು, ಅಪ್ಪಯ್ಯಾ, ನೀನು ಗುಣವಂತನಾಗಿರುವೆ,'' ಎನ್ನುತ್ತ ಶಾರದಾಬಾಯಿ ಮಗನ ಹೆಗಲುಗಳ ಮೇಲೆ ಕೈಯಿಟ್ಟು ಕಣ್ತುಂಬಿ ಅವನನ್ನು ನೋಡಿದರು, ಮತ್ತು ಎಂದರು, "ಮಗನೆ, ನೀನು ಗುಣವಂತನಾಗಿರುವುದರಿಂದ ಮನೆಯಲ್ಲಿ ಏನೋ ಒಂದು ಬಗೆಯ ಸಮಾಧಾನವು, ಏನೋ ಒಂದು ಬಗೆಯ ಸೌಂದರ್ಯವು ಬಂದಿರುವುದು, ಅಲ್ಲವೆ?"

"ಅಹುದು, ಅವ್ವಾ, ನಿನ್ನ ಸ್ವಭಾವವು ಈಗ ಎಷ್ಟು ಸೌಮ್ಯವಾಗಿದೆ, ಎಷ್ಟು ಸವಿಯಾಗಿದೆ! ಆಗ ನಿನ್ನ ಬಳಿಯಲ್ಲಿ ಬರಲು, ನಿನ್ನೊಡನೆ ಮಾತನಾಡುತ್ತ ಕೂಡಲು ಮನಸ್ಸು ಬೇಸರುಪಡುತ್ತಿತ್ತು, ಒಮ್ಮೊಮ್ಮೆ ನನಗೆ ಹೆದರಿಕೆಯೂ ಆಗುತ್ತಿತ್ತು. ಈಗ ಸಲುಗೆಯಿಂದ ಬಂದು ಕುಳಿತು, ಮಾತನಾಡಿ ಆನಂದಪಡುತ್ತಿರುವೆನು ನೋಡು! ಅವ್ವಾ ತಾಯಿಯ ಸುಖವನ್ನು ಈ ನಾಲ್ಕು ತಿಂಗಳುಗಳಲ್ಲಿಯೆ ಅರಿತಿದ್ದೇನೆ. ನನ್ನ ಹಿಂದಿನ ನಡೆವಳಿಯಿಂದ ನೀನು ಕೋಪಿಸಿಕೊಂಡಿದ್ದರೆ, ಈಗಿನ ನಡೆವಳಿಯನ್ನು ನೋಡಿ ನನ್ನನ್ನು ಕ್ಷಮಿಸುವೆಯಾ?" ಕಮಲಾಕ್ಷನ ಕಣ್ಣುಗಳು ನೀರುದುಂಬಿದುವು.

ಶಾರದಾಬಾಯಿ ಮಗನನ್ನು ಎದೆಗೆ ಅವಚಿಕೊಂಡು ಅವನ ಬೆನ್ನ ಮೇಲೆ ಕೈಯಿಳಿಯುತ್ತ; "ಕಮಲಾಕ್ಷಾ, ಇಂದು ನಿಜವಾಗಿಯೂ ನಾನು ಪುತ್ರವತಿಯಾಗಿದ್ದೇನೆ. ನನ್ನ ಮಗನು ಇಷ್ಟು ಗುಣಿಯಾಗುವನೆಂದು ನಾನು ಬಗೆದಿರಲಿಲ್ಲ. ಮಗು, ನಿನ್ನಂತೆ ನಾನೂ ಯದುಪತಿಗೆ ಋಣಿಯಾಗಿದ್ದೇನೆ. ಆತನ ಊರು ಯಾವುದು, ಕಮಲಾಕ್ಷಾ,?''

"ಯದುಪತಿಯ ಊರು ದೇವನಹಳ್ಳಿ."

"ಏನು? ದೇವನಹಳ್ಳಿ?''

" ಅಹುದು. "

" ಆತನ ತಂದೆಯ ಹೆಸರನ್ನು ಬಲ್ಲೆಯಾ ?"

" ಬಲ್ಲೆನು. ಶ್ರೀಧರರಾಯರೆಂದು ಆತನ ತಂದೆಯ ಹೆಸರು. "

ಕೇಳಿ ಶಾರದಾಬಾಯಿಗೆ ದಿಗಿಲಾಯ್ತು. ಸ್ವಲ್ಪ ತಡೆದು ಅವರು ಎಂದರು, " ಕಮಲಾಕ್ಷಾ, ಯದುಪತಿಯ ತಾಯಿಯ ಹೆಸರನ್ನೂ ಬಲ್ಲೆಯಾ?"

ಬಲ್ಲೆನು, ಅವ್ವಾ. ಕಮಲಮ್ಮನವರು ಎಂದು ಯದುಪತಿಯ ತಾಯಿಯ ಹೆಸರು. "

ಮಗನು ಎಂದುದನ್ನು ಕೇಳಿದೊಡನೆ ಶಾರದಾಬಾಯಿ ಆಘಾತವಾದಂತಾಗಿ ಅಂಗಯ್ಯ ಮೇಲೆ ಹಣೆಯಿಟ್ಟುಕೊಂಡು ಕುಳಿತರು. ಕಣ್ಣುಗಳಿಂದ ನೀರು ಹರಿಯತೊಡಗಿತು. ಅವರು ಪಶ್ಚಾತ್ತಾಪದ ವೇಗಕ್ಕೆ ಸಿಕ್ಕಿ ತೀವ್ರವಾದ ಮನೋವ್ಯಥೆಗೆ ಗುರಿಯಾಗಿ ವಿಹ್ವಲೆಯಾದರು, ವ್ಯಥೆಯನ್ನು ಸಹಿಸಲಾರದೆ ಬಿಕ್ಕಿ ಬಿಕ್ಕಿ ಅಳತೊಡಗಿದರು.

" ಅವ್ವಾ !" ಕಮಲಾಕ್ಷನು ತಾಯಿಯ ದುಃಖದಿಂದ ಮನನೊಂದು ಎಂದನು.

ತಾಯಿ ಮಗನ ಹೆಗಲ ಮೇಲೆ ಹಣೆಯಿಟ್ಟು ಎಷ್ಟೋ ಹೊತ್ತು ಅತ್ತು, ದುಃಖದ ವೇಗವು ಸ್ವಲ್ಪ ಕಡಿಮೆಯಾದ ಬಳಿಕ ಬಿಕ್ಕುತ್ತ ಎಂದರು, "ಕಮಲಾಕ್ಷಾ, ನೀನು ನನ್ನನ್ನು ಕ್ಷಮಿಸಬೇಕು ! ನಿನ್ನ ಮಿತ್ರನನ್ನು ನಾನು ಬಲವಾಗಿ ನೋಯಿಸಿರುವೆನು ! ತನ್ನ ತಾಯಿ ಸತ್ತು ಒಂದು ತಿಂಗಳಾಗಿರುವಾಗ ಯದುಪತಿ ಆಶ್ರಯವನ್ನು ಬೇಡುತ್ತ ನಮ್ಮ ಮನೆಗೆ ಬಂದನು. ನಾನು ನಿರ್ಘೃಣೆಯಾಗಿ ಅಭದ್ರಗಳನ್ನು ನುಡಿದು ಆತನನ್ನು ಹೊರದೂಡಿದೆನು. 'ಪುನಃ ಈ ಮನೆಗೆ ನೀನು ಬರುವ ಕಾರಣವಿಲ್ಲ !' ಎಂದು ಹೇಳಿ ಆತನನ್ನು ಅಟ್ಟಿದೆನು, ಮಗನೆ ! ಅಯ್ಯೋ, ಎಂತಹ ಅಪರಾಧವನ್ನು ಮಾಡಿದೆನು ! ನೀನು ನನ್ನ ಮಗನೆಂದು ಆತನು ಅರಿತಿದ್ದರೂ ಇಷ್ಟೊಂದು ಉಪಕಾರವನ್ನು ನಮಗೆ ಮಾಡಿರುವನಲ್ಲ ! 'ನೀನು ನಮ್ಮ ಮನೆಗೆ ಬರಬೇಡ,' ಎಂದು ನಾನು ಹೇಳಿದ ಬಳಿಕ, ನೀನು ಕರೆದರೂ, ಆತನು ಹೇಗೆ ಬರಬೇಕು, ಮಗನೆ ? ಕಮಲಾಕ್ಷಾ, ಯದುಪತಿ ನಮಗೆ ದೂರದವನಲ್ಲವೊ ! ಆತನು ನಿನ್ನ ಸೋದರತ್ತೆಯ ಮಗನು........ !"

ಶಾರದಾಬಾಯಿಗೆ ದುಃಖದ ವೇಗವು ಬಲವತ್ತರವಾಯ್ತು, ವೇದನೆ ಅಸಹ್ಯವಾಯ್ತು. ಅವರು ಮತ್ತೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದರು. ಕಮಲಾಕ್ಷನು ದುಃಖದಿಂದ ವಿಹ್ವಲನಾದನು. ದುಃಖದ ವೇಗವನ್ನು ತಡೆದು ತಾಯಿಯ ಬೆನ್ನ ಮೇಲೆ ಕೈಯಾಡಿಸುತ್ತ ಮೆಲ್ಲನಿಯಿಂದ ಎಂದನು, "ಅವ್ವಾ, ಅಪರಾಧವನ್ನು ನೀನು ಮಾಡಿರುವೆ. ನಿನಗೆ ದೂರದವನಲ್ಲದ ಅನಾಥನು ಆಶ್ರಯವನ್ನು ಬೇಡಲು ಬಂದಾಗ ಯಾವ ವಿಚಾರವನ್ನೂ ಮಾಡದೆ, ಆತನಿಗೆ ಅಪಶಬ್ದಗಳನ್ನು ನುಡಿದು, ಮನಸ್ಸನ್ನು ನೋಯಿಸಿ ಆತನನ್ನು ಹೊರಗೆ ಅಟ್ಟಿದೆ. ತಂದೆತಾಯಿಗಳನ್ನು ಕಳೆದುಕೊಂಡ ಪರದೇಶಿ ಹುಡುಗನು ನನ್ನವರು ನನ್ನ ಕೈಹಿಡಿವರು ಎಂದು ನಂಬಿ ಬಂದಾಗ ನೀನು ಆತನಿಗೆ ಅಭದ್ರಶಬ್ದಗಳನ್ನಾಡಿದೆ. ಆತನು ನಿನಗೆ ಭಾರವಾಗುತ್ತಿರಲಿಲ್ಲ. ತರುವವರು ತರುತ್ತಿದ್ದರು, ಮಾಡುವವರು ಮಾಡುತ್ತಿದ್ದರು. ಅವ್ವಾ, ನಿನ್ನ ಹೃದಯವು ಇಷ್ಟು ಕಠಿಣವು ಹೇಗಾಯ್ತು ? ಆತನ ಗತಿ ಏನೆಂಬ ಯೋಚನೆಯೂ ನಿನಗೆ ಬರಲಿಲ್ಲವಲ್ಲವೆ ? ಅಪ್ಪನು ನೀನು ಮಾಡಿದುದನ್ನು ಅರಿಯರು. ಆದರೆ ಅವರದೂ ತಪ್ಪು ! ತಂಗಿ ಸತ್ತ ಬಳಿಕ ಆಕೆಯ ಮಗನ ಗತಿ ಏನೆಂದು ಅವರು ತಾವಾಗಿಯೆ ವಿಚಾರಿಸಬೇಕಿತ್ತು. ಈವರೆಗೂ ಅವರು ವಿಚಾರಿಸಿಲ್ಲ ! ನೀವಿಬ್ಬರೂ ಎಂತಹ ಅಪವಾದವನ್ನು ಹೊತ್ತಿರಲ್ಲ !—"

ಶೇಷಗಿರಿರಾಯರು ಬಂದರು. ತಾಯಿ ಮತ್ತು ಮಗನು ಹೀಗೆ ವಿಹ್ವಲರಾಗಿ ಕುಳಿತುದನ್ನು ಕಂಡು ಆಶ್ಚರ್ಯದಿಂದಲೂ ಭೀತಿಯಿಂದಲೂ ಅವರ ಕಡೆಗೆ ನೋಡುತ್ತ ನಿಂತರು. ಕಮಲಾಕ್ಷನು ಎಲ್ಲವನ್ನು ವಿವರಿಸಿ ಎಂದನು, "ಅಪ್ಪಾ, ಎಂತಹ ಅಪರಾಧವನ್ನು ನೀವು ಮಾಡಿರುವಿರಿ ! ತಂಗಿಯ ವಿಷಯದಲ್ಲಿ ಈ ಬಗೆಯ ದುರ್ಲಕ್ಷ್ಯವೆ ? ನಾನು ಹುಟ್ಟಿದ ಬಳಿಕ ನಿಮ್ಮ ಮನೆಗೆ ನಿಮ್ಮ ತಂಗಿ ಬಂದಿಲ್ಲ ಅವಳು ಬಡವೆಯೆಂದು ಇಷ್ಟೊಂದು ತಾತ್ಸಾರವೆ ? ಅವಳು ಹೋದ ಬಳಿಕ ಅವಳ ಮಗನ ಸ್ಥಿತಿಗತಿಯನ್ನು ವಿಚಾರಿಸುವುದು ನಿಮ್ಮ ಕರ್ತವ್ಯವಾಗಿರಲಿಲ್ಲವೆ ? ಎಂತಹ ಕಲ್ಲು ಮನವಿದು ! ಅನಾಥನು ಬಾಗಿಲಿಗೆ ಬಂದರೆ ಆತನನ್ನು ಬಯ್ದು ಅಟ್ಟಿದಳು ನನ್ನ ಈ ತಾಯಿ ! ಆದರೆ ಆ ಪುಣ್ಯವಂತನು ಈ ವಿಷಯದಲ್ಲಿ ಒಂದು ಚಕಾರವನ್ನೂ ನುಡಿದಿಲ್ಲ. ತನ್ನನ್ನು ಅಪಮಾನಗೊಳಿಸಿದವಳ ಮಗನನ್ನು ಮನುಷ್ಯನನ್ನು ಮಾಡಲು

ಯತ್ನ ಪಟ್ಟನು ಆ ಧೀರನು ! ಅಪ್ಪಾ, ನಿಮ್ಮ ಸಂಪತ್ತು ನಿಮಗಿರಲಿ. ನಾನೂ ಯದುಪತಿಯಂತೆ ಮಾಧುಕರಿಮಾಡಿಕೊಂಡು ಇರುವೆನು ! ಸದ್ವಿನಿಯೋಗ ವಿಲ್ಲದ ಸಂಪತ್ತು ನನಗೆ ಬೇಡ !'' ಕಮಲಾಕ್ಷನಿಗೆ ಮುಂದೆ ಮಾತು ಬಾರದು.

'' ಮಗನೆ, ತಪ್ಪಾಯ್ತು ! ನೀನು ಕ್ಷಮಿಸಲಾರೆಯಾ ನಮ್ಮನ್ನು ?" ಶೇಷಗಿರಿರಾಯರು ಸಗದ್ಗದವಾಗಿ ಎಂದರು.

'' ಅಪ್ಪಾ, ಕ್ಷಮಿಸುವವನು ನಾನಲ್ಲ, ಯದುಪತಿ. ಉದಾರ ಹೃದಯ-ನಾದ ಆತನು ನಿಮ್ಮನ್ನು ಕ್ಷಮಿಸಿರುವನು. ಹಾಗಿಲ್ಲದಾಗಿದ್ದರೆ ನನಗೆ ಆತನ ಹೃದಯದಲ್ಲಿ ಸ್ಥಾನವೇ ದೊರೆಯುತ್ತಿರಲಿಲ್ಲ. ಆತನ ಮುಂದೆ ನಿಮ್ಮ ತಪ್ಪನ್ನು ಒಪ್ಪಿಕೊಳ್ಳುವಿರಾ? ಅವ್ವಾ, ನೀನು ಒಪ್ಪಿಕೊಳ್ಳುವೆಯಾ? ಅಯ್ಯೋ, ನೀವಿಬ್ಬರೂ ನನ್ನನ್ನು ಸಂಕಟದಲ್ಲಿ ತಳ್ಳಿರುವಿರಿ !'' ಕಮಲಾಕ್ಷನ ಕಣ್ಣುಗ-ಳಿಂದ ನೀರು ಹೊನಲಾಗಿ ಹರಿಯಿತು.

'' ಮಗನೆ, ನನ್ನ ತಪ್ಪನ್ನು ನಿನ್ನ ಮುಂದೆ ಒಪ್ಪಿಕೊಂಡಿರುವೆನು," ಶಾರದಾಬಾಯಿ ಎಂದರು, '' ಯದುಪತಿಯ ಮುಂದೆಯೂ ಒಪ್ಪಿಕೊಳ್ಳು ವೆನು, ಆತನ ಕ್ಷಮೆಯನ್ನು ಕೇಳುವೆನು, ಮತ್ತು ಕಮಲಾಕ್ಷನಿಗೆ ಒಪ್ಪುವ ತಾಯಿಯಾಗುವೆನು !"

'' ಕಮಲಾಕ್ಷಾ, ಈಗಲೆ ಯದುಪತಿಯ ಕಡೆಗೆ ಹೋಗುವ. ಆತನ ಮುಂದೆ ತಪ್ಪನ್ನು ಒಪ್ಪಿಕೊಳ್ಳುವೆನು, ಮತ್ತು ಕ್ಷಮೆಯನ್ನು ಬೇಡುವೆನು. ನಿನ್ನ ಕಡೆಗಾದರೂ ನೋಡಿ ಆತನು ನಮ್ಮನ್ನು ಕ್ಷಮಿಸುವನು. ಕಮಲಾಕ್ಷಾ, ನನ್ನ ಸಂಪತ್ತಿನಿಂದ ನಾನು ಭಾಗ್ಯವಂತನಲ್ಲ, ನಿನ್ನಿಂದ ನಾನು ಭಾಗ್ಯವಂತನು!" ಶೇಷಗಿರಿರಾಯರು ಎಂದರು.

'' ಅಪ್ಪಾ, ನಿಮ್ಮಿಂದ ಅನ್ಯಾಯವಾಯ್ತೆಂದು, ಘೋರವಾದ ಅನ್ಯಾ-ಯವಾಯ್ತೆಂದು ನೊಂದ ನನ್ನ ಬಾಯಿಂದ ಬಿರುನುಡಿಗಳು ಬಂದುವು. ನನ್ನನ್ನು ಕ್ಷಮಿಸಿರಿ: ಅವ್ವಾ, ನನ್ನನ್ನು ಕ್ಷಮಿಸು, '' ಎನ್ನುತ್ತ ಕಮಲಾಕ್ಷನು ತಂದೆ ತಾಯ್ಗಳ ಮುಂದೆ ಕೈಮುಗಿದು ತಲೆಬಾಗಿ ನಿಂತನು.

'' ಕಮಲಾಕ್ಷಾ, ನೀನು ನನ್ನ ಮಗನು. ನಾನು ಭಾಗ್ಯವಂತನು, '' ಶೇಷಗಿರಿರಾಯರು ಎಂದರು.

" ಮಗನೇ, ನಾನು ನಿನ್ನ ತಾಯಿ, " ಶಾರದಾಬಾಯಿ ಎಂದರು.

ಮೊದಲಿನಿಂದಲೂ ಇಷ್ಟು ಹೊತ್ತಿನ ವರೆಗೆ ಎಲ್ಲವನ್ನೂ ಕೇಳುತ್ತ ಮತ್ತು ನೋಡುತ್ತ ಮೌನವಾಗಿ ನಿಂತಿದ್ದ ಮಾಧವಿ ಕಮಲಾಕ್ಷನ ಕಡೆಗೆ ನೋಡುತ್ತ ಸಗದ್ಗದೆಯಾಗಿ ಎಂದಳು, " ಅಣ್ಣಾ, ನಾನು ನಿನ್ನ ತಂಗಿ ! "

"ಅಮ್ಮಯ್ಯಾ ಮಾಧವೀ, ನನ್ನ ಜೀವವನ್ನು ಮರೆತೇನು, ನಿನ್ನನ್ನು ನಾನು ಮರೆಯೆನವ್ವಾ !" ತಂಗಿಯನ್ನು ಅರಳಿದ ಕಣ್ಣುಗಳಿಂದ ನೋಡುತ್ತ ಕಮಲಾಕ್ಷನು ಎಂದನು.

ಅಣ್ಣತಂಗಿಯರ ಆ ನಿರ್ವ್ಯಾಜ ಪ್ರೇಮವು ವಾತಾವರಣವನ್ನು ಪ್ರಸನ್ನ ವಾಗಿಸಿತು.

" ಈಗ ನಾವು ಯದುಪತಿಯ ಕಡೆಗೆ ಹೊರಡಬಹುದಲ್ಲವೆ, ಕಮಲಾಕ್ಷಾ ?" ಶೇಷಗಿರಿರಾಯರು ಕೇಳಿದರು.

" ಅಪ್ಪಾ, ಯದುಪತಿ ಮನೆಯಲ್ಲಿ ಇರುವನೊ ಇಲ್ಲವೊ ನೋಡಿ ಬರುವೆನು. ಆತನು ಇದ್ದರೆ ಹೋಗೋಣವಂತೆ. "

" ಈಗ ಹೋಗಿ ನೋಡಿ ಬರುವೆಯಾ ?"

" ನೋಡಿ ಬರುವೆನು, " ಎಂದು ಕಮಲಾಕ್ಷನು ಮುಖವನ್ನು ತೊಳೆದುಕೊಂಡು ಮಾಧವಾಚಾರ್ಯರ ಮನೆಯ ಕಡೆಗೆ ನಡೆದನು.

ಯದುಪತಿ ಆಗಲೇ ಪುರುಷೋತ್ತಮರಾಯರ ಮನೆಯಿಂದ ಆಚಾರ್ಯರ ಮನೆಗೆ ಬಂದಿದ್ದನು. ಬೀರಣ್ಣನು ಮತ್ತು ಸಾವಕ್ಕನು ಅಲ್ಲಿ ಬಂದಿದ್ದರು. ಭಟ್ಟರೂ ಇದ್ದರು. ಆಚಾರ್ಯರು ಮೊದಲಾಗಿ ಎಲ್ಲರೂ ಹರ್ಷಭರಿತರಾಗಿದ್ದರು. " ಗುರುಗಳೆ, ನಾನು ಹೇಳಿದ್ದೆನು ಯದುಪತಿಗೆ, ' ಮೊದಲನೆಯ ನಂಬರು ನಿನ್ನದು, ' ಎಂದು. ಹಾಗೇ ಆಯ್ತು ನೋಡಿರಿ. ನನ್ನ ಮಗನು ಬುದ್ಧಿವಂತನು, ಗುರುಗಳೇ !" ಸಾವಕ್ಕನು ಅಭಿಮಾನದಿಂದ ನುಡಿದಳು.

" ಅವ್ವಾ, ನೀನು ಭಾಗ್ಯವಂತೆ, ಸಾವಿತ್ರೀ. ನಿನ್ನ ಪುಣ್ಯವು ಸಾಮಾನ್ಯವಲ್ಲ, ಆಚಾರ್ಯರು ಎಂದರು.

" ಗುರುಗಳೆ, ನೀವು ಮಾರ್ಗದರ್ಶಕರಾಗಿರುವಿರಿ ನನ್ನ ಮಗನಿಗೆ. ಆದುದರಿಂದ ಈ ಭಾಗ್ಯವು ನನಗೆ !"

" ಸಾವಿತ್ರೀ, ಯದುಪತಿಗೆ ನಿನ್ನ ಪುತ್ರವಾತ್ಸಲ್ಯವು ಮತ್ತು ಆಚಾರ್ಯರ ಶಿಷ್ಯವಾತ್ಸಲ್ಯವು ದೊರೆತಿವೆ. ಆತನು ಇನ್ನೂ ದೊಡ್ಡವನಾಗುವನು. ಮಗಳೇ, ನೀನು ದೊಡ್ಡವನ ತಾಯಿಯಾಗುವೆ, " ಭಟ್ಟರು ಎಂದರು.

" ತಾತಯ್ಯಾ, ನೀವು ಪುಣ್ಯವಂತರು. ನಿಮ್ಮ ಆಶೀರ್ವಾದವು ಫಲಿಸಲಿ, " ಬೀರಣ್ಣನು ಎಂದನು.

ಈ ಹೊತ್ತಿಗೆ ಕಮಲಾಕ್ಷನು ಬಂದು ಎಲ್ಲರಿಗೂ ನಮಸ್ಕಾರ ಮಾಡಿದನು. ಎಲ್ಲರೂ ಆಶೀರ್ವದಿಸಿ ಅವನನ್ನು ಅಭಿನಂದಿಸಿದರು.

" ಕಮಲಾಕ್ಷಾ, ನಮ್ಮ ಕುಟುಂಬದಲ್ಲಿ ನೀನೂ ಒಬ್ಬನಯ್ಯಾ. ನಮ್ಮ ಆನಂದವನ್ನು ನೀನು ಹೆಚ್ಚಿಸಿರುವೆ ಪರೀಕ್ಷೆಯಲ್ಲಿ ಉತ್ತಮ ಯಶಸ್ಸನ್ನು ಪಡೆದು, " ಆಚಾರ್ಯರು ಹರ್ಷಿತರಾಗಿ ನುಡಿದರು.

" ಗುರುಗಳೆ, ಯದುಪತಿಯ ಮಿತ್ರತ್ವವು ನನಗೆ ದೊರೆಯದೆ ಇರುತ್ತಿದ್ದರೆ ನನ್ನ ಗತಿ ಏನಾಗುತ್ತಿದ್ದಿತೊ! ನನ್ನ ಯಶಸ್ಸಿಗೆ ಆತನು ಕಾರಣವು. ಆತನು ನನ್ನನ್ನು ತನ್ನ ಗೆಳೆಯನನ್ನು ಮಾಡಿಕೊಂಡುದರಿಂದ ತಮ್ಮ ಕುಟುಂಬದಲ್ಲಿ ಒಬ್ಬನಾಗುವ ಸೌಭಾಗ್ಯವು ನನಗೆ ಬಂದಿತು. ತಮ್ಮೆಲ್ಲರಿಗೆ ನಾನು ಚಿರಋಣಿ ನನ್ನ ತಂದೆತಾಯಿಗಳೂ ತಮ್ಮೆಲ್ಲರಿಗೂ ಋಣಿಯಾಗಿರುವರು. ಗುರುಗಳೇ,…………"

" ಹೇಳು, ಮಗನೆ, ಸುಮ್ಮನಾದೆಯಲ್ಲ ? " ಆಚಾರ್ಯರು ನುಡಿದರು.

" ನನ್ನ ತಂದೆ ತಾಯಿಗಳ ಅಪರಾಧವನ್ನು ಕ್ಷಮಿಸುವಿರಾ ? ನಿಮ್ಮೆಲ್ಲರ ಪಾದಗಳ ಮೇಲೆ ಬೀಳುವೆನು. ನನ್ನ ತಂದೆ ತಾಯಿಗಳನ್ನು ದಯೆಯಿಟ್ಟು ಕ್ಷಮಿಸಿರಿ, " ಕಮಲಾಕ್ಷನು ಅವರೆಲ್ಲರ ಮುಂದೆ ಅಡ್ಡಬಿದ್ದನು.

ಆಚಾರ್ಯರು ಅವನನ್ನು ಎಬ್ಬಿಸಿ ತಮ್ಮ ಬಳಿಯಲ್ಲಿ ಕುಳ್ಳಿರಿಸಿಕೊಂಡು ಎಂದರು, " ನೀನು ನಮ್ಮವನಾಗಿರುವಾಗ, ಕಮಲಾಕ್ಷಾ, ನಿನ್ನ ತಂದೆ ತಾಯಿಗಳು ನಮಗೆ ಹೊರಗಿನವರಾಗರು. "

" ಗುರುಗಳೇ, ಐದು ವರ್ಷಗಳ ಹಿಂದೆ ಯದುಪತಿ ನಮ್ಮ ಮನೆಗೆ ಬಂದಿದ್ದನಂತೆ, ಆತನು ಯಾರೆಂಬುದೆಂದು ತಿಳಿದರೂ ನನ್ನ ತಾಯಿ ದುಷ್ಟ

ಮಾತುಗಳನ್ನಾಡಿ ಪುನಃ ನಮ್ಮ ಮನೆಗೆ ಬರಬೇಡವೆಂದು ಹೇಳಿ ಆತನನ್ನು ಹೊರಗಟ್ಟಿದಳಂತೆ. ಐಶ್ವರ್ಯದ ಮದದಿಂದ ಅವಳು ಹೀಗೆ ಅಯೋಗ್ಯವಾಗಿ ವರ್ತಿಸಿದಳು. ನನ್ನ ತಂದೆಯೂ ತನ್ನ ತಂಗಿಯ ಯೋಗಕ್ಷೇಮ ವನ್ನು ವಿಚಾರಿಸಲಿಲ್ಲ. ಅವಳು ಹೋದ ಬಳಿಕ ಅವಳ ಮಗನ ಗತಿ ಏನೆಂಬು ದನ್ನೂ ಅವರು ಆಲೋಚಿಸಲಿಲ್ಲ. ಈ ಬಗೆಯ ನಿರ್ಘೃಣತೆಗೆ ಕ್ಷಮೆ ದೊರೆವ ಬಗೆ ಹೇಗೆ ? ಹಿಂದಿನ ವೃತ್ತಾಂತವೆಲ್ಲ ಇಂದು ನನಗೆ ಗೊತ್ತಾಯ್ತು. ಹಿಂದಿನ ಕಮಲಾಕ್ಷನು ಈಗ ನಾನಿರದೆ ನಾನು ಮನುಷ್ಯನಾಗಿರುವುದಕ್ಕೆ ಯದುಪತಿಯೆ ಕಾರಣವೆಂಬುದು ನನ್ನ ತಂದೆ ತಾಯಿಗಳಿಗೆ ಗೊತ್ತಾಯ್ತು. ತಮ್ಮಿಂದ ಅಪಮಾನಹೊಂದಿದ್ದರೂ ಯದುಪತಿ ಅದನ್ನು ಮನಸ್ಸಿನಲ್ಲಿ ತಾರದೆ ತಮ್ಮ ಮಗನಿಗೆ ಮತ್ತು ತಮಗೆ ಭಾಗ್ಯದ ದಿನಗಳನ್ನು ಒದಗಿಸಿದುದನ್ನು ಕಂಡು ಅವರಿಗೆ ತಾವು ಮಾಡಿದ ತಪ್ಪು ನಿಚ್ಚಳವಾಗಿ ಕಾಣಿಸುತ್ತದೆ. ತಮ್ಮ ವರ್ತ ನವು ಎಷ್ಟು ಹೇಯವಾಯ್ತೆಂಬುದು ಇಂದು ಅವರಿಗೆ ಮನದಟ್ಟಾಗಿದೆ. ಅನಾಥೆಯನ್ನು ದುರ್ಲಕ್ಷಿಸಿದೆವಲ್ಲಾ, ಅನಾಥನನ್ನು ನೋಯಿಸಿದೆವಲ್ಲಾ ಎಂದು ಅವರು ಈಗ ಮಿಡುಗುತ್ತಿರುವರು. ಪಶ್ಚಾತ್ತಾಪದಿಂದ ಅವರ ಹೃದ ಯವು ಬೇಯುತ್ತಿದೆ. ನನ್ನ ತಂದೆತಾಯಿಗಳ ಅಪರಾಧವನ್ನು ಅರಿತಿದ್ದರೂ ಯದುಪತಿ ತನ್ನ ಹೃದಯದಲ್ಲಿ ನನಗೆ ಆಶ್ರಯವಿತ್ತನು. ಕ್ಷಮಾಶೀಲನು ಆತನು. ನನ್ನ ತಂದೆತಾಯಿಗಳನ್ನು ಕ್ಷಮಿಸೆಂದು ನಾನು ಆತನನ್ನು ಬೇಡಿ ದರೆ ನನಗೆ ಕ್ಷಮೆಯ ಭಿಕ್ಷೆಯನ್ನು ಆತನು ನೀಡದೆ ಇರಲಾರನೆಂದು ಮತ್ತು ನೀವೆಲ್ಲರು ನನ್ನ ಕಡೆಗೆ ನೋಡಿ ನನ್ನ ತಂದೆ ತಾಯಿಗಳನ್ನು ಕ್ಷಮಿಸದೆ ಇರ ಲಾರಿರೆಂದು ನಂಬಿ ನಿಮ್ಮೆಡೆಗೆ ಬಂದಿದ್ದೇನೆ. ಕ್ಷಮೆಯ ಭಿಕ್ಷೆಯನ್ನು, ಯದು ಪತೀ, ನನಗೆ ನೀಡುವೆಯಾ ? ನೀಡು, ಮಿತ್ರಾ ! ನೀವೆಲ್ಲರೂ ನೀಡುವಿರಾ ? ನನ್ನ ತಂದೆ ತಾಯಿಗಳು ಇಲ್ಲಿಗೆ ಬರಲು ಈಗ ಹೊರಟು ನಿಂತಿದ್ದಾರೆ. ಅವ ರನ್ನು ಕರೆಕೊಂಡು ಬರಲು ನನಗೆ ಅಪ್ಪಣೆ ಕೊಡಿರಿ, ” ಕಮಲಾಕ್ಷನು ಕಂಬನಿ ಗರೆಯುತ್ತ ಕೈಮುಗಿದುಕೊಂಡು ನಿಂತನು.

ಕಮಲಾಕ್ಷನ ಮನೋವ್ಯಥೆ ಎಲ್ಲರ ಅಂತಃಕರಣವನ್ನು ಕರಗಿಸಿತು. ಸಾವಕ್ಕನು ಎದ್ದುಬಂದು ಅವನನ್ನು ಕೈಹಿಡಿದೊಯ್ದು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು ಎಂದಳು, “ ಕಮಲಾಕ್ಷಾ, ನೀನು ನಮ್ಮವನಾಗಿರುವಾಗ

ನಿನ್ನ ತಂದೆ ತಾಯಿಗಳಿಗೋಸುಗ ಇಷ್ಟೊಂದು ಪರಿ ನೀನು ಬೇಡಿಕೊಳ್ಳಬೇಕೆ ? ಯದುಪತಿಯ ಮತ್ತು ನಿಮ್ಮ ಸಂಬಂಧವನ್ನು ನಾವಾರೂ ಅರಿಯದೆ ಇಲ್ಲ. ಸಮಯವನ್ನು ಕಾಯುತ್ತಿದ್ದೆವು. ನಿನ್ನ ತಂದೆ ತಾಯಿಗಳು ಇಂದು ಪಶ್ಚಾತ್ತಾಪದಿಂದ ಪರಿಶುದ್ಧರಾಗಿರುವರು. ನಾವು ಕಾಯುತ್ತಿದ್ದ ಆ ಮಂಗಲ ಸಮಯವು ಇಂದು ಬಂದಿತು. ನಾವೆಲ್ಲರೂ ಇಂದು ಒಂದಾಗಿರುವೆವು. ಅಲ್ಲವೆ, ಗುರುಗಳೆ ? ”

“ ಅಹುದು, ಮಗಳೆ, ಇಂದಿನ ದಿನವು ನಮ್ಮ ಜೀವನದಲ್ಲಿಯೆ ಶುಭ ದಿನವು, ಆನಂದದ ದಿನವು. ಕಮಲಾಕ್ಷಾ, ಯದುಪತಿ ಈಗ ನಿನ್ನೊಡನೆ ನಿನ್ನ ತಂದೆತಾಯಿಗಳ ಆಶೀರ್ವಾದಗಳನ್ನು ಬೇಡಲು ಬರುವನು. ಇಂದು ಶುಕ್ರವಾರ. ರಾತ್ರಿ ಲಕ್ಷ್ಮೀಪೂಜೆಗೆ ನೀವೆಲ್ಲರೂ ಬನ್ನಿರಿ. ನಿಮ್ಮೆಲ್ಲರ ರಾತ್ರಿಯ ಊಟವು ಇಲ್ಲಿಯೇ ಆಗಲಿ ಪುರುಷೋತ್ತಮರಾಯರೂ ಡಾಕ್ಟರ ಶ್ಯಾಮರಾಯರೂ ತಮ್ಮ ಮನೆಯವರೊಡನೆ ಬರುವರು. ನೀನೂ ಯದುಪತಿಯೂ ನನ್ನ ಪರವಾಗಿ ನಿನ್ನ ತಂದೆ ತಾಯಿಗಳಿಗೆ ಮತ್ತು ತಂಗಿಗೆ ಔತಣವನ್ನು ಹೇಳಿರಿ, ಮತ್ತು ನನ್ನ ಬಿನ್ನಹವನ್ನು ಮನ್ನಿಸಬೇಕೆಂದು ಅವರನ್ನು ಪ್ರಾರ್ಥಿಸಿರಿ. ಇನ್ನು ಹೊರಡಿರಿ. ಯದುಪತೀ, ಕಮಲಾಕ್ಷಾ, ನೀವಿಬ್ಬರೂ ಇಲ್ಲಿ ಕೆಲಸ ಮಾಡಬೇಕು. ಬೇಗನೆ ತಿರುಗಿ ಬನ್ನಿರಿ. ಹೊರಡಿರಿ, ” ಎಂದು ಹೇಳಿ ಆಚಾರ್ಯರು ಎದ್ದರು

ಯದುಪತಿಯೂ ಕಮಲಾಕ್ಷನೂ ಕೈಯಲ್ಲಿ ಕೈಯಿರಿಸಿ ಹೊರಟರು.

* * * *

## ೧೫

ಯದುಪತಿಗೆ ತನ್ನ ಸೋದರಮಾವನ ಮನೆಗೆ---ಹಿಂದೆ ಯಾವ ಮನೆಯಲ್ಲಿ ತನಗೆ ಅಪಮಾನವಾಗಿದೆ ಅಲ್ಲಿಗೆ--ಹೇಗೆ ಹೋಗಬೇಕು ಎಂಬ ಸಂಕೋಚವು ಇರಲಿಲ್ಲ. ಸಂಕೋಚವು ಕ್ಷುದ್ರ ಮನೋವೃತ್ತಿಯ ಲಕ್ಷಣವು. ಯದುಪತಿಯ ಅಂತಃಕರಣವು ಉದಾರವಾದುದು, ಆತನು ಕ್ಷಮಾಶೀಲನು,

ಆದುದರಿಂದ ಶೇಷಗಿರಿರಾಯರ ಮನೆಗೆ ಹೊರಟಾಗ ಆತನ ಮನಸ್ಸು ಪ್ರಸನ್ನ ವಿದ್ದಿತು. ಶೇಷಗಿರಿರಾಯರಿಗೂ ಶಾರದಾಬಾಯಿಗೂ ತಮ್ಮ ತಪ್ಪು ಗೊತ್ತಾ-ಯ್ತೆಂಬುದನ್ನು ಅರಿತು ಆತನು ಆನಂದಿತನಾದನು. ಆತನು ಮನಸ್ಸಿನಲ್ಲಿ ಎಂದನು, “ ಮನುಷ್ಯನಿಗೆ ತನ್ನ ತಪ್ಪು ಗೊತ್ತಾಗಬೇಕು. ಎಂದರೇನೆ ಅವ-ನಿಗೆ ತನ್ನ ಉನ್ನತಿಯ ಮಾರ್ಗವು ಕಾಣಿಸುತ್ತದೆ, ಮತ್ತು ಪಶ್ಚಾತ್ತಾಪಪೂರ್ವಕ ವಾಗಿ ಆ ತಪ್ಪನ್ನು ಸರಿಪಡಿಸಿಕೊಳ್ಳಬೇಕು ಎಂಬ ಬುದ್ಧಿ ಅವನಿಗೆ ಬಂದರೆ ಉನ್ನತಿಯ ಮಾರ್ಗದಲ್ಲಿ ಬಂದು ನಿಲ್ಲಲು ಅವನು ಸಮರ್ಥನಾಗುತ್ತಾನೆ. ನನ್ನ ಸೋದರಮಾವನು ಮತ್ತು ಅತ್ತೆ ತಮ್ಮ ತಪ್ಪನ್ನು ಅರಿತರು. ಅವರಿಗೆ ತೀವ್ರ ವಾದ ಪಶ್ಚಾತ್ತಾಪವಾಗಿದೆ. ಅವರ ಮುಂದಿನ ಮಾರ್ಗವು ಇನ್ನು ನಿರ್ವಿಘ್ನ ವಾಗುವುದು. ಅಕ್ಕನು ಎಂದಂತೆ ನಾವೆಲ್ಲರೂ ಇಂದು ಒಂದಾಗಿರುವೆವು. ಎಷ್ಟು ಮೃದುವಾಗಿ ನಮ್ಮನ್ನು ಒಂದಾಗಿಸಿದಳು ಅಕ್ಕನು! ಎಷ್ಟು ಮಧುರವಾಗಿ ಸಂಬಂಧವನ್ನು ದೃಢವಾಗಿಸಿದರು ಗುರುಗಳು! ದೊಡ್ಡವರ ರೀತಿಯೆ ಒಂದು ವಿಧ. ಅಕ್ಕಾ, ನನ್ನನ್ನು ಹೀಗೆಯೆ ಮೃದುವಾಗಿ ನೀನು ತಿದ್ದುತ್ತಿರುವೆ! ಗುರುಗಳೆ, ನನ್ನನ್ನು ಹೀಗೆಯೆ ಮಧುರವಾಗಿ ನೀವು ಮುನ್ನಡೆಯಿಸುತ್ತಿರುವಿರಿ! ಎಂತಹ ಪುಣ್ಯವು ನನ್ನದು! ” ಯದುಪತಿ ಆದರದಿಂದ ಇಬ್ಬರ ಅಡಿಗಳಿಗೂ ಮನಸ್ಸಿನಲ್ಲಿ ಬಾಗಿದನು.

ಕಮಲಾಕ್ಷನು ಯದುಪತಿಯೊಡನೆ ಬರುತ್ತಿರುವುದನ್ನು ದೂರದಿಂದ ಕಂಡು ಮಾಧವಿ ತಾಯಿಯ ಬಳಿಗೆ ಬಂದು ಎಂದಳು, “ ಅವ್ವಾ, ಅಣ್ಣನು ಅವರನ್ನೇ ಕರೆಕೊಂಡು ಬಂದಂತೆ ತೋರುತ್ತದೆ, ನೋಡು. ”

“ ಯಾರನ್ನು, ಮಾಧವಿ ? ” ಶಾರದಾಬಾಯಿ ಕೇಳಿದರು.

“ ತನ್ನ ಆ ಮಿತ್ರನನ್ನು. ”

“ ಯದುಪತಿಯನ್ನೆ ? ”

“ ಅಹುದು, ಅವ್ವಾ. ”

ಶಾರದಾಬಾಯಿ ಕೂಡಲೆ ಪತಿಯೊಡನೆ ಬಾಗಿಲ ಬಳಿಯಲ್ಲಿ ಬಂದು ನಿಂತರು. ಮಿತ್ರರಿಬ್ಬರೂ ಕೈಯಲ್ಲಿ ಕೈಯಿರಿಸಿ ನಗೆಮುಖದಿಂದ ಬರುತ್ತಿರುವು

ದನ್ನು ಅವರು ಕಂಡರು. ಈ ವರೆಗೆ ಅವರನ್ನು ಅಸ್ವಸ್ಥಗೊಳಿಸಿದ್ದ ಎದೆಯ ಮೇಲಿನ ಭಾರವು ಓಸರಿಸತೊಡಗಿತು, ಮನಸ್ಸಿನ ತೊಡಕು ಬಿಚ್ಚತೊಡಗಿತು. ಸೋದರಳಿಯನನ್ನು ಕಂಡೊಡನೆ ಶೇಷಗಿರಿರಾಯರಿಗೆ ಚಿಕ್ಕಂದಿನಲ್ಲಿ ತಮ್ಮ ತಂಗಿಯೊಡನೆ ಕಳೆದ ಸುಖದ ದಿನಗಳು ನೆನಪಿಗೆ ಬಂದುವು. "ಅಯ್ಯೊ, ಆ ಉದಾರ ಮನಸ್ಸಿನ ತಂಗಿಯನ್ನು ಪೂರ್ಣವಾಗಿ ಮರೆವಷ್ಟು ನನ್ನ ಮನಸ್ಸು ಕಠಿಣವಾಗಿತ್ತಲ್ಲವೆ? ಆದರೂ ಬದುಕಿಕೊಂಡೆನು; ಅಲ್ಲ, ಆಕೆಯ ಔದಾರ್ಯ ವನ್ನು ಸಂಪೂರ್ಣವಾಗಿ ತನ್ನದಾಗಿಸಿರುವ ಆಕೆಯ ಮಗನು ನನ್ನನ್ನು ಬದು ಕಿಸಿದನು," ಎಂದು ಅವರು ತಮ್ಮಷ್ಟಕ್ಕೆ ಎನ್ನುತ್ತಿರುವಾಗ ಅವರ ಕಣ್ಣು ಗಳಲ್ಲಿ ನೀರು ತುಂಬಿತು. ಅಷ್ಟರಲ್ಲಿ ಕಮಲಾಕ್ಷನೂ ಯದುಪತಿಯೂ ಬಂದರು. ಕಮಲಾಕ್ಷನು, "ಅಪ್ಪಾ, ಯದುಪತಿಯು ಬಂದಿದ್ದಾನೆ," ಎಂದೆನ್ನುತ್ತಿರುವಾಗ ಯದುಪತಿ ಸೋದರಮಾವನಿಗೂ ಅತ್ತೆಗೂ ಆದರದಿಂದ ನಮಸ್ಕರಿಸಿದನು. ಇಬ್ಬರೂ, "ಮಗು, ಆಯುಷ್ಮಂತನಾಗು," ಎಂದು ಪ್ರೇಮಪೂರ್ವಕವಾಗಿ ಹರಸಿದರು.

ಬಳಿಕ ಶಾರದಾಬಾಯಿ ಎಂದರು, "ಯದುಪತಿ, ನೀನು ಒಳ್ಳೆಯವನು. ನಿನ್ನ ಒಳ್ಳೆಯತನವು ನಮ್ಮೆಲ್ಲರನ್ನು ಬದುಕಿಸಿತು. ನಾನು ನುಡಿದ ಅಪಶಬ್ದ ಗಳನ್ನು ನೀನು ಮನಸ್ಸಿನಲ್ಲಿ ಇಟ್ಟುಕೊಂಡಿದ್ದರೆ, ತಿರುಗಿ ನಮ್ಮ ಮುಖವನ್ನು ನೀನು ನೋಡುತ್ತಿರಲಿಲ್ಲ. ಆದರೆ ನೀನು ನನ್ನ ಮಗನಿಗೆ—ವರ್ಗದಲ್ಲಿ ನಿನ್ನ ಅಪಮಾನಕ್ಕೆ ಕಾರಣವಾದವನಿಗೆ—ಅವನ ಅಪರಾಧವನ್ನು ಕ್ಷಮಿಸಿ ಮಿತ್ರ ನಾಗಿ ಉಪಕಾರ ಮಾಡಿದೆ. ನಿನ್ನನ್ನು ಅವನು ಬದುಕಿರುವವರೆಗೂ ಆದರ ಪೂರ್ವಕವಾಗಿ ನೆನೆವಂತೆ ಮಾಡಿದೆ. ಚಿಕ್ಕವನು ನೀನು. ನಿನ್ನ ಔದಾರ್ಯವು ನಮಗೆ ಬುದ್ಧಿಗಲಿಸಿತು. ನಾವು ನಿನಗೆ ಮತ್ತು ನಿನ್ನ ತಾಯಿಗೆ ಮಾಡಿದ ಅಪಮಾನವನ್ನು ಹೇಗೆ ಅಳಿಸಬೇಕು ಎಂಬುದನ್ನು ನಾವು ತಿಳಿಯೆವು. ನಮ್ಮ ತಪ್ಪನ್ನು ನಾವು ನಿನ್ನ ಮುಂದೆ ಒಪ್ಪಿಕೊಳ್ಳುವ ಮೊದಲೆ ನೀನಾಗಿಯೆ ನಮ್ಮನ್ನು ಕ್ಷಮಿಸಿದೆ, ಮತ್ತು ನೀನೇ ನಮ್ಮಲ್ಲಿಗೆ ಬಂದು ನೀನು ಕ್ಷಮಿಸಿದು ದನ್ನು ನಿನ್ನ ಕ್ರಿಯೆಯಲ್ಲಿ ತೋರಿಸಿದೆ. ಯದುಪತಿ, ನೀನು ದೊಡ್ಡವನು. ಇನ್ನೂ ದೊಡ್ಡವನಾಗುವೆ."

"ಅತ್ತೆ, ನಾನು ನಿಮ್ಮವನೆ ಅಲ್ಲವೆ? ಯಾವ ಕಾರಣದಿಂದಲೊ ದೈವವು ನನ್ನನ್ನು ನಿಮ್ಮಿಂದ ಈ ವರೆಗೆ ದೂರವಾಗಿಸಿತು. ಇನ್ನು ನನಗೆ

ನಿಮ್ಮ ಹೃದಯದಲ್ಲಿ ಎಡೆಗೊಡುವಿರಾ ? ತಾಯಿ ಸತ್ತಳು, ಆದರೆ ಸೋದರ ಮಾವನು ಇರುವರು ಎಂದು ನಾನು ಧೈರ್ಯವನ್ನು ತಳೆಯಲಾ? ಮಾಮಯ್ಯಾ, ನಾನು ನಿಮ್ಮ ತಂಗಿಯ ಮಗನು ನಿಮ್ಮ ಸೇವೆಯನ್ನು ಮಾಡಲು ಕಮ ಲಾಕ್ಷನಿಗೆ ಇರುವಂತೆ ನನಗೂ ಅಧಿಕಾರವಿರುವುದಲ್ಲವೆ? ಮಾಮಯ್ಯಾ, ಅತ್ತೆ, ಇನ್ನು ನನ್ನನ್ನು ನೀವು ದೂರವಿರಿಸುವುದಿಲ್ಲವೆಂದು ನಿಮ್ಮಿಂದ ನನಗೆ ಅಭಿವಚನವು ದೊರೆಯಬಹುದೆ ? ''

" ಯದುಪತಿ, " ಶೇಷಗಿರಿರಾಯರು ಎಂದರು, " ಆಗಳೇ ಹೇಳಿರು ವಳು ನಿನ್ನ ಅತ್ತೆ, ನಿನ್ನ ಒಳ್ಳೆಯತನವು ನಮ್ಮನ್ನು ಬನುಕಿಸಿತೆಂದು. ಮಗು, ನಿನ್ನ ನಿಃಸ್ವಾರ್ಥಪ್ರೇಮವು ನಮ್ಮ ಹೃದಯಗಳನ್ನು ಸೆರೆಗೊಂಡಿದೆ. ನಿನ್ನ ಔದಾರ್ಯವು ನಮಗೆ ಮಂಗಲಜೀವನದ ದರ್ಶನವನ್ನು ಮಾಡಿಸಿದೆ, ಮತ್ತು ನಮ್ಮ ದೃಷ್ಟಿಯನ್ನು ಶುಭವಾಗಿಸಿದೆ. ನನ್ನ ತಂಗಿಯ ಮತ್ತು ನಿನ್ನ ವಿಷಯ ದಲ್ಲಿ ನಾವು ಮಾಡಿದ ತಪ್ಪಿಗಾಗಿ ದೇವನು ನಮ್ಮ ಪಾಲಿಗೆ ಇಟ್ಟಿರುವ ಶಿಕ್ಷೆ ಯನ್ನು ಅನುಭವಿಸಲು ಸಿದ್ಧರಿದ್ದೇವೆ. ಇನ್ನು ಮುಂದೆ ನಮ್ಮಿಂದ ಅಪ ರಾಧವು ಆಗದಂತೆ ದೇವನು ನಮಗೆ ದಯೆತೋರಿಸಬೇಕೆಂದು ಅನನ್ಯಭಾವ ದಿಂದ ಬೇಡಿಕೊಳ್ಳುತ್ತೇನೆ. ಯದುಪತಿ, ಇನ್ನು ನಾನು ನಿನ್ನನ್ನು ನನ್ನ ಹೃದಯದಿಂದ ಹೊರಗಿರಿಸಿದರೆ ಪ್ರಾಣವು ನನ್ನನ್ನು ಆಗಲಲಿ ! ಹೋದ ವಸ್ತು ಭಗವತ್‌ಕೃಪೆಯಿಂದ ತಿರುಗಿ ದೊರೆತಿತು. ನಾನು ಭಾಗ್ಯವಂತನು. ಮಾಧವೀ, ಯದುಪತಿ ಹಿರಿಯನಮ್ಮಾ; ಆತನಿಗೆ ನಮಸ್ಕಾರ ಮಾಡು.

ಮಾಧವಿ ಮುಂದೆ ಬಂದು ಯದುಪತಿಗೆ ನಮಸ್ಕಾರ ಮಾಡಿ " ಅಣ್ಣ ನಿಗೆ ನೀವು ನಿಮ್ಮ ಹೃದಯದಲ್ಲಿ ಎಡೆಗೊಟ್ಟಿರುವಿರಿ. ನನಗೂ ಎಡೆಗೊಡುವಿ ರಲ್ಲವೆ ? " ಮುಗುಳುನಗೆಯಿಂದ ಎಂದಳು.

" ಅಷ್ಟು ವಿಶಾಲವಾಗಿರುವುದೇ ನನ್ನ ಹೃದಯವು? ಅಷ್ಟು ವಿಶಾಲ ವಿದ್ದರೆ ಒಳಿತೇ ಆಯ್ತು. ಇರದಿದ್ದರೆ ಅದನ್ನು ವಿಶಾಲವಾಗಿಸುವ ಹೊಣೆ ನಿನ್ನದು ಮತ್ತು ನಿಮ್ಮೆಲ್ಲರದು, '' ಯದುಪತಿ ನಸುನಗುತ್ತ ಉತ್ತರವಿತ್ತನು.

" ಎಂತಹ ಹೊಣೆಯನ್ನು ನನಗೆ ಹೊರಿಸಿದಿರಲ್ಲ! ಚಿಕ್ಕವಳಿಗೆ ನೀವು ಈ ಹೊಣೆಯನ್ನು ಹೊರಿಸಬಹುದೆ ? ''

" ಹಾಗಾದರೆ, ನೀನು ದೊಡ್ಡವಳಾಗು ! "

" ನನ್ನನ್ನು ದೊಡ್ಡವಳನ್ನು ಮಾಡುವ ಹೊಣೆ ನಿಮ್ಮದು ಹಾಗಾದರೆ?"

" ನಿನ್ನನ್ನೂ ನನ್ನನ್ನೂ ನಮ್ಮೆಲ್ಲರನ್ನೂ ದೊಡ್ಡವರನ್ನು ಮಾಡುವ ಹೊಣೆ ದೇವನದು. ಆತನಿಗೇ ನಾವು ಶರಣುಹೋಗಬೇಕು. ಅಲ್ಲವೆ, ಮಾಮಯ್ಯಾ ? "

" ಅಹುದು, ನಿನ್ನ ಮಾತು ನಿಜವು. ನಮ್ಮೆಲ್ಲರನ್ನು ದೇವನು ದೊಡ್ಡವರನ್ನು ಮಾಡಲಿ! ಎಂತಹ ಪಾವನವಾದ ವಾತಾವರಣವನ್ನು ನಿರ್ಮಿಸಿದೆ ನೀನು, ಯದುಪತೀ! ಕಮಲಾಕ್ಷನು ನಿನ್ನ ಸಹವಾಸದಿಂದ ಇಷ್ಟು ಅಲ್ಪಾವಧಿಯಲ್ಲಿ ಸನ್ಮಾರ್ಗದ ಪ್ರಭಾವವನ್ನು ಹೇಗೆ ಅರಿತನೆಂಬುದು ಈಗ ನನಗೆ ಗೊತ್ತಾಯ್ತು, " ಶೇಷಗಿರಿರಾಯರು ಆನಂದಭರಿತರಾಗಿ ನುಡಿದರು.

" ಅಪ್ಪಾ, " ಕಮಲಾಕ್ಷನು ಎಂದನು, " ಆಚಾರ್ಯರಲ್ಲಿ ಇಂದು ರಾತ್ರಿ ಲಕ್ಷ್ಮೀಪೂಜೆ. ಪೂಜೆಗೆ ಮಾಧವಿ ಮೊದಲಾಗಿ ನಮ್ಮೆಲ್ಲರನ್ನು ಅವರು ಆಮಂತ್ರಿಸಿರುವರು. ಇಂದು ನಮ್ಮೆಲ್ಲರ ರಾತ್ರಿಯ ಊಟವು ತಮ್ಮಲ್ಲಿ ಆಗಬೇಕೆಂದು ಅವರ ಇಚ್ಛೆ. ' ನೀನೂ ಯದುಪತಿಯೂ ನನ್ನ ಪರವಾಗಿ ನಿನ್ನ ತಂದೆ ತಾಯಿಗಳಿಗೆ ಮತ್ತು ತಂಗಿಗೆ ಔತಣವನ್ನು ಹೇಳಿರಿ, ಮತ್ತು ನನ್ನ ಬಿನ್ನಹವನ್ನು ಮನ್ನಿಸಬೇಕೆಂದು ಅವರನ್ನು ಪ್ರಾರ್ಥಿಸಿರಿ, ' ಎಂದು ಅವರು ಹೇಳಿಕಳಿಸಿರುವರು. ನೀವು ಆಮಂತ್ರಣವನ್ನು ಸ್ವೀಕರಿಸಿರುವಿರೆಂದು ನಾವು ಆಚಾರ್ಯರಿಗೆ ತಿಳಿಸಬಹುದಲ್ಲವೆ? ನಮ್ಮ ಮುಖ್ಯ ಅಧ್ಯಾಪಕರಾದ ಪುರುಷೋತ್ತಮರಾಯರೂ ಡಾ. ಶ್ಯಾಮರಾಯರೂ ತಮ್ಮ ಮನೆಯವರೊಡನೆ ಬರುವರು. "

" ಕಮಲಾಕ್ಷಾ, ಯದುಪತೀ, ಆಮಂತ್ರಣವನ್ನು ಆನಂದದಿಂದ ಸ್ವೀಕರಿಸುವೆವು. ಎಷ್ಟು ಹೊತ್ತಿಗೆ ನಾವು ಆಚಾರ್ಯರಲ್ಲಿ ಇರಬೇಕು ? ಅವರ ಮನೆ ಎಲ್ಲಿ ? "

" ಪೂಜೆ ಏಳುವರೆ ಗಂಟೆಗೆ ಪ್ರಾರಂಭವಾಗುವುದು, ಮಾಮಯ್ಯಾ. ಆ ಹೊತ್ತಿಗೆ ನೀವು ಆಚಾರ್ಯರಲ್ಲಿ ಇರಬೇಕು. ಅವರ ಮನೆ ದೊಡ್ಡ ಬೀದಿಯಲ್ಲಿ ಸೋಮೇಶ್ವರ ಮಂದಿರದ ಬಲಪಕ್ಕದ ಓಣಿಯಲ್ಲಿ. ಕಮಲಾಕ್ಷನಾಗಲಿ

ನಾಗಲಿ ನಿಮ್ಮನ್ನು ಕರೆಕೊಂಡು ಹೋಗಲು ಬರುವೆವು. ನಮಗೆ ಅಲ್ಲಿ
ಸವಿದೆ. ಈಗ ಬೇಗನೆ ನಾವು ಹೊರಡಬೇಕು. ಇನ್ನು ನಾವು ಹೊರಡ
ಕುದಲ್ಲವೆ ? '' ಯದುಪತಿ ಎಂದನು.

" ಸ್ವಲ್ಪ ಉಪಾಹಾರವನ್ನು ತೆಗೆದುಕೊಂಡು ಹೋಗಿರಿ, " ಎಂದು ರದಾಬಾಯಿ ಅವರನ್ನು ಒಳಗೆ ಕರೆದೊಯ್ದು ಉಪಾಹಾರ ಮಾಡಿಸಿ ಕಳ ರು.

ಯದುಪತಿ ಮತ್ತು ಕಮಲಾಕ್ಷನು ಹೋದಬಳಿಕ ಶಾರದಾಬಾಯಿ ದರು, " ಯದುಪತಿ ಇಲ್ಲಿಗೆ ಬರುವ ಮೊದಲು ನನ್ನ ಮನಸ್ಸು ನಾಚಿಕೆಯು ರದಿಂದ ಮುದುಡಿಕೊಂಡಿದ್ದಿತು. ಆತನನ್ನು ಕಂಡು ತಪ್ಪನ್ನು ಒಪ್ಪಿ ಳ್ಳಬೇಕೆಂದು ನಾನು ನಿರ್ಣಯಿಸಿದ್ದರೂ ಮನಸ್ಸು ಹೆದರಿ ಹಿಂಜರಿಯು ದ್ದಿತು. ವೈಯ್ಯೊಸಕ್ತಿನಿಂದ ಮಾಡಿದ ತಪ್ಪು ಮನಸ್ಸನ್ನು ಎಷ್ಟೊಂದು ಂದರೆಗೆ ಈಡುಮಾಡುತ್ತಿದೆ ನೋಡಿರಿ. ಏಕೆ ನಾವು ಎಚ್ಚರುದಪ್ಪಿ ಕ್ಕಿಗೆ ಒಳಗಾಗುವೆವೊ ! ಕಳೆದ ಎರಡು ಗಂಟೆಗಳಲ್ಲಿ ನನ್ನನ್ನು ಒಳಗೊಳಗೆ ಯಿಸಿದ ತಳ್ಳಂಕವೆಂತಹದದು ! ಆದರೆ ಯದುಪತಿಯು ಔದಾರ್ಯವೆಂತ ು ನೋಡಿರಿ. ಆತನು ಮೆಲ್ಲನೆ ಭಾರವನ್ನು ಕೆಳಗಿಳಿಸಿದನು. ಮನೆ ಳಗೆ ಆತನು ಬಂದನು ಕುಲುಕುಲು ನಗುತ್ತ ! ನಮ್ಮನ್ನು ಕಾಣಲು ಆತ ಸಂಕೋಚವೇ ಇರಲಿಲ್ಲ. ಬಹು ದಿವಸಗಳಿಂದ ಕಾಣದಿದ್ದ ಪ್ರೀತಿಯು ಯಿಯನ್ನು ಕಾಣಲು ಬರುವಂತೆ ಬಂದನು ಆ ಧೀರನು ! ನಿರ್ಮಲ ಮನದ ಪತ್ತು ಘನವಾದುದು. ಅದರ ಪ್ರಭಾವವನ್ನು ನೋಡಿರಿ, ನನ್ನ ಆ ನಾಚಿಕೆ, ತಳ್ಳಂಕ ಹೇಗೋ ಹೋಯ್ತಲ್ಲ ! ಕ್ಷಣದಲ್ಲಿ ನಾನೂ ದೊಡ್ಡವಳಾದೆನು. ರು ಯದುಪತಿಗೆ ಜನ್ಮವಿತ್ತ ತಂದೆ ತಾಯಿಗಳು ! "

" ಅಹುದು. ನನ್ನ ಸ್ಥಿತಿಯೂ ನಿನ್ನಂತೆಯೆ ಆಗಿತ್ತು, " ಶೇಷಗಿರಿ ಯರು ಎಂದರು, " ನಾನು ಆತನ ತಾಯಿಯನ್ನು ಉಪೇಕ್ಷಿಸಿದರೂ, ನು ಇರುವನೊ ಇಲ್ಲವೊ ಎಂಬುದನ್ನೂ ನಾನು ವಿಚಾರಿಸದಿದ್ದರೂ, ಯಕ್ಕೆಂದು ಮನೆಗೆ ಬಂದರೆ ಅಷ್ಟು ನಿಷ್ಠುರಣವಾಗಿ ಆತನನ್ನು ನೀನು ರದೂಡಿದರೂ ನಮ್ಮಿಂದ ಯಾವ ತಪ್ಪೂ ಆಗಿಲ್ಲವೆಂಬಂತೆ ಆತನ ವರ್ತನ

ವಿದೆ ನೋಡು. ಎಂತಹ ಔದಾರ್ಯವಿದು! ನನ್ನ ತಂಗಿಯೂ ಈತನಂತೆಯೆ ಇದ್ದಳು. ತಂಗೀ, ನಾನು ಅಪರಾಧಿ, ಮಹಾಪರಾಧಿ! ಆದರೆ ನೀನು ಕ್ಷಮಾ ಶೀಲೆ. ನಿನ್ನ ಮಗನಲ್ಲಿ ನಿಂತು ನನ್ನನ್ನು ಕ್ಷಮಿಸುತ್ತಿರುವೆ, ಕ್ಷಮೆಗೆ ನಾನು ಅರ್ಹನಲ್ಲದಿದ್ದರೂ ನೀನು ನನ್ನನ್ನು ಕ್ಷಮಿಸುತ್ತಿರುವೆ! ಆದರೆ ದೇವನು ನನ್ನನ್ನು ಕ್ಷಮಿಸುವನೇ? ಕ್ಷಮಿಸುವನು, ಕ್ಷಮಿಸುತ್ತಿರುವನು, ಕ್ಷಮಿಸಲು ಯದುಪತಿಯನ್ನು ಕಳಿಸಿರುವನು!" ರಾಯರು ಮುಖವನ್ನು ಕೆಳಗೆ ಮಾಡಿದರು.

"ಅಪ್ಪಾ, ಒಮ್ಮೆಯೂ ನೀವು ಅಣ್ಣನಿಗಾಗಲಿ ನನಗಾಗಲಿ ಅವ್ವನಿಗಾಗಲಿ ಬಿರುಸು ಮಾತನ್ನು ಆಡಿಲ್ಲ. ಇಂತಹ ನೀವು ಉದಾರ ಹೃದಯದ ಅತ್ತೆಯನ್ನು ಮತ್ತು ಅವರ ಮಗನನ್ನು ಉಪೇಕ್ಷಿಸಿದಿರಿ ಹೇಗೆ?" ಮಾಧವಿ ಎಂದಳು.

"ಕೈತುಂಬ ಬರುತ್ತಿರುವ ದುಡ್ಡು ನನ್ನನ್ನು ಕೆಡಿಸಿತು, ತಾಯೀ!"

"ನಾನೂ ಕಾರಣವಾದೆನು, ಮಾಧವೀ. ಹೊಸ ಸಂಸಾರದ ಚಕ್ಕಂದವು ನಮ್ಮನ್ನು ಅರೆಗುರುಡರಾಗಿಸಿತು. ಬಳಿಕ ನಾವು ಅರೆಗುರುಡರಾಗಿಯೆ ಉಳಿದೆವು. ಸಂಸಾರವು ಹೊಸದಿರುವಾಗ ಮೈತುಂಬ ಎಚ್ಚರಿಕೆ ಬೇಕು, ಎಂದು ನನ್ನ ತಾಯಿ ಹೇಳುತ್ತಿದ್ದುದನ್ನು ಸಂಸಾರದಲ್ಲಿ ಕಾಲಿಡುತ್ತಲೇ ನಾನು ಮರೆತುಬಿಟ್ಟೆನು. ಸಂಸಾರದಲ್ಲಿ ನಮಗೆ ಯಾವುದಕ್ಕೂ ಕೊರತೆ ಇರಲಿಲ್ಲ. ಬೇಕಾದ ಸೌಕರ್ಯಗಳನ್ನು ಒದಗಿಸಲು ಇವರು ಸಮರ್ಥರು. ಹೀಗಾಗಿ ನಮ್ಮ ಜೀವನವು ವಿಲಾಸಮಯವಾಯ್ತು. ನನ್ನ ಕಣ್ಣುಗಳು ನೆತ್ತಿಗೇರ ತೊಡಗಿದುವು, ಮತ್ತು ನನ್ನ ಜೀವನವು ಸ್ವಾರ್ಥಿಯಾಯ್ತು. ದೂರವಿದ್ದ ನಾದನಿಯೂ ನನಗೆ ಅಪ್ರಿಯೆಯಾದಳು. ತಂಗಿ ಆಗಾಗ ಬರುತ್ತಿದ್ದರೆ ಮನೆಯಲ್ಲಿ ಅಸಂತೋಷವು ಉಂಟಾಗಿ ಸುಖಕ್ಕೆ ಎಲ್ಲಿ ಕೊರತೆಯಾಗುವುದೊ ಎಂಬ ಭಯದಿಂದ ಇವರು ತಂಗಿಯನ್ನು ಉಪೇಕ್ಷಿಸತೊಡಗಿದರು, ಮತ್ತು ದಿನಗಳು ಹೋದ ಹಾಗೆ ಅವರ ವಿಷಯದಲ್ಲಿ ಉದಾಸೀನರಾದರು. ಇವರ ಬೆಲ್ಲದಂತಹ ಮನಸ್ಸು ಅವರ ವಿಷಯದಲ್ಲಿ ಕಲ್ಲಾಯ್ತು! ಅವರ ಗಂಡನು

ತೀರಿದರೆಂದು ಅವರಿಂದ ಪತ್ರ ಬಂದರೆ ತಾವೇ ಉತ್ತರವನ್ನು ಬರೆವಷ್ಟು ಇವರಲ್ಲಿ ಸೌಜನ್ಯವು ಉಳಿಯಲಿಲ್ಲ; ನನಗೆ ಹೇಳಿದರು ಉತ್ತರ ಬರೆಯಲು ಇವರು!"

ಸಂಜೆಯ ಹೊತ್ತಿಗೆ ಕಮಲಾಕ್ಷನು ತನ್ನ ತಂದೆ ತಾಯಿಗಳನ್ನು ಮತ್ತು ತಂಗಿಯನ್ನು ಆಚಾರ್ಯರ ಮನೆಗೆ ಕರೆಕೊಂಡು ಹೋಗಲು ಬಂದನು. ಅವರೂ ಸಿದ್ಧರಾಗಿಯೆ ಕುಳಿತಿದ್ದರು. ಕಮಲಾಕ್ಷನು ಎಂದನು, "ಈಗ ಆಚಾರ್ಯರಲ್ಲಿಗೆ ನಾವು ಹೊರಡಬಹುದಲ್ಲವೆ, ಅವ್ವಾ ?"

"ಹೊರಡಬಹುದು," ಶಾರದಾಬಾಯಿ ಎಂದರು, "ಅಡುಗೆಯವರನ್ನು ಕರೆದಿರುವರೇನು, ಕಮಲಾಕ್ಷಾ ?"

"ಇಲ್ಲ. ರಾಧಮ್ಮನವರು ಮತ್ತು ಡಾ. ಶ್ಯಾಮರಾಯರ ಹೆಂಡತಿ ರಮಾಬಾಯಿ ಅಡಿಗೆ ಮಾಡುವರು, ಮತ್ತು ಲಕ್ಷ್ಮೀಬಾಯಿ ಮತ್ತು ಸಾವಕ್ಕನು ಮೇಲ್ಗೆಲಸವನ್ನು ನೋಡಿಕೊಳ್ಳುವರು.

"ಲಕ್ಷ್ಮೀಬಾಯಿ ಯಾರು, ಮಗು ?"

"ನಮ್ಮ ಮುಖ್ಯ ಅಧ್ಯಾಪಕರಾದ ಪುರುಷೋತ್ತಮರಾಯರ ಹೆಂಡತಿ."

"ಎಲ್ಲರು ಈಗ ಬಂದಿರುವರೇನು ?"

"ಲಕ್ಷ್ಮೀಬಾಯಿ ಬಂದಿದ್ದಾರೆ. ಸಾವಕ್ಕನು ಬೆಳಗಿನಿಂದ ಅಲ್ಲಿಯೇ ಇರುವಳು. ರಮಾಬಾಯಿ ನಾವು ಅಲ್ಲಿಗೆ ಹೋಗುವುದರೊಳಗೆ ಬಂದಿರುವರು."

"ರಾಧಮ್ಮನವರು ಅಡಿಗೆಯನ್ನು ಪ್ರಾರಂಭಿಸಿರುವರೇನು ?"

"ಅದೇ ಸಿದ್ಧತೆಯಲ್ಲಿ ಇದ್ದರು. ಈಗ ಪ್ರಾರಂಭಿಸಿರಬಹುದು."

"ಅಡಿಗೆಗೆ ನಾನೂ ನೆರವಾಗಬಹುದಲ್ಲವೆ ?"

"ನೆರವಾಗಬಹುದು, ಅವ್ವಾ."

"ಹಾಗಾದರೆ ಬೇಗನೆ ಹೊರಡುವ."

"ಮಾಧವೀ, ನೀನು ಯಾವ ಕೆಲಸವನ್ನು ಮಾಡುವೆ ಆಚಾರ್ಯರಲ್ಲಿ?" ಕಮಲಾಕ್ಷನು ತಂಗಿಗೆ ಎಂದನು, "ನಿನಗೆ ಅಲ್ಲಿ ಕೆಲಸವೇ ಇಲ್ಲ. ಇಲ್ಲಪೆಂದರೂ ಇದೆ. ಮಕ್ಕಳನ್ನು ಆಡಿಸುವೆಯಾ ?"

"ಅಣ್ಣಾ, ಕೆಲಸ ಮಾಡುವವರಿಗೆ ಬೇಕಾದಷ್ಟು ಕೆಲಸವಿರುತ್ತದೆ. ಒಲ್ಲದವರಿಗೆ ಏನೂ ಇರುವುದಿಲ್ಲ. ನಿಮ್ಮೆಲ್ಲರಿಗಿಂತ ಹೆಚ್ಚು ಕೆಲಸವನ್ನು ನಾನು ಮಾಡುವೆನು ನೋಡು."

" ಅಪ್ಪನು ನಿನಗೆ ಕೆಲಸವನ್ನೇ ಕಲಿಸಿಲ್ಲ. ನಾನೂ ಶುಂಭನಾಗಿಯೇ ಉಳಿಯುತ್ತಿದ್ದೆನು, ಆದರೆ ಯದುಪತಿ ನನಗೆ ಗೆಳೆಯನಾದುದರಿಂದ ಎಷ್ಟೋ ಕೆಲಸಗಳನ್ನು ಕಲಿಯಲು ನನಗೆ ಅನುಕೂಲವಾಯ್ತು. "

" ನೋಡಿಯಾದರೂ ನೋಡು, ಅಣ್ಣಾ; ಅಲ್ಲಿ ಎಲ್ಲರೂ ಮೆಚ್ಚುವಂತೆ ಕೆಲಸ ಮಾಡುವೆನು "

" ಆಗಲಿ; ಹಿಂದುಗಡೆ ಸಾವಕ್ಕನನ್ನು ಕೇಳುವೆನು, ' ನನ್ನ ತಂಗಿಯ ಕೆಲಸವನ್ನು ಮೆಚ್ಚಿದೆಯಾ, ' ಎಂದು. ಅವಳು ಎಷ್ಟು ಕುಶಲೆ ಬಲ್ಲೆಯಾ ?"

" ಸಾವಕ್ಕನು ಎಷ್ಟು ಕುಶಲೆಯಾದರೂ ಏನು ? ಅವರ ಬಾಯಿಂದಲೇ ನುಡಿಯಿಸುವೆನು, ' ಬಹು ಕುಶಲೆ ನಿನ್ನ ತಂಗಿ, ಕಮಲಾಕ್ಷಾ, " ಎಂದು.

ಅಣ್ಣತಂಗಿಯರ ವಿನೋದವು ಅವರ ತಂದೆತಾಯಿಗಳನ್ನು ಆನಂದಗೊಳಿಸಿತು. ಎಲ್ಲರೂ ಹಸನ್ಮುಖರಾಗಿ ಹೊರಟರು. ಆಚಾರ್ಯರ ಮನೆಗೆ ಬರಲು ಅವರಿಗೆ ಅರ್ಧಗಂಟೆ ಬೇಕಾಯ್ತು.

ಯದುಪತಿಯೂ ಯದುಪತಿಯ ಸಾಹಾಯ್ಯದಿಂದ ಕಮಲಾಕ್ಷನೂ ಪರೀಕ್ಷೆಯಲ್ಲಿ ಸ್ಪೃಹಣೀಯವಾದ ಯಶಸ್ಸನ್ನು ಸಂಪಾದಿಸಿದ ಸಂಗತಿಯಿಂದ ಆಚಾರ್ಯರ ಹೃದಯವು ಕೃತಜ್ಞತೆಯಿಂದ ತುಂಬಿದ್ದಿತು. " ದೇವಾ, ನೀನು ನನ್ನ ಸೇವೆಯನ್ನು ಸ್ವೀಕರಿಸುತ್ತಿರುವೆಯೆಂಬುದನ್ನು ಈ ಸಂಗತಿಯಿಂದ ಸ್ಪಷ್ಟಗೊಳಿಸುತ್ತಿರುವೆಯಲ್ಲವೆ ? ಇನ್ನು ಮುಂದೂ ನೀನೇ ನನಗೆ ಮಾರ್ಗದರ್ಶಕನು. ನನ್ನ ಹೊಣೆ ಹೆಚ್ಚುತ್ತಿರುವುದು ಆದರೂ ಚಿಂತಿಸೆನು. ನೀನು ತೋರುವ ಮಾರ್ಗದಲ್ಲಿ ನಡೆಯಲು ನನಗೆ ದಾರ್ಢ್ಯವನ್ನು ದಯೆಪಾಲಿಸು, ತಂದೇ ! " ಎಂದು ಅನನ್ಯಭಾವದಿಂದ ಅವರು ಹೃದ್ಗತನಾದ ಪರಮೇಶ್ವರನನ್ನು ಎಷ್ಟೋ ಸಲ ಪ್ರಾರ್ಥಿಸಿದರು. ಸಂಯಮಶೀಲರ ಆನಂದವು ವಿಲಕ್ಷಣವಾದುದು. ಆಚಾರ್ಯರ ಹೃದಯವು ಆನಂದದಿಂದ ಅರಳಿತ್ತೆಂಬುದು ನಿಜವು. ಆದರೆ ಅಲ್ಲಿ ಉದ್ವೇಗಕ್ಕೆ ಎಡೆಯಿರಲಿಲ್ಲ, ಸಂರಂಭಕ್ಕೆ ಸ್ಥಾನವಿರಲಿಲ್ಲ, ವಿಭ್ರಮಕ್ಕೆ ಅವಕಾಶವಿರಲಿಲ್ಲ, ಚಾಪಲಕ್ಕೆ ಆಸ್ಪದವಿರಲಿಲ್ಲ ಅವರ ಮನಸ್ಸು ಶಾಂತವಾಗಿದ್ದಿತು, ಅಂತರಾತ್ಮವು ಪ್ರಸನ್ನವಾಗಿದ್ದಿತು. ಆದುದರಿಂದ ಅಂದು ಲಕ್ಷ್ಮೀಪೂಜೆಗೆ ಬಂದವರ ಮೇಲೆಯೂ ಅವರ ಸಂಯಮದ ಪ್ರಭಾವವು ಉಂಟಾಗದೆ

ಇರಲಿಲ್ಲ. ಅವರ ಪೂಜಾವಿಧಾನದಿಂದ ಎಲ್ಲರ ಮನಸ್ಸು ಶಾಂತವಾಯ್ತು ಮತ್ತು ಎಲ್ಲರ ಅಂತರಾತ್ಮವು ಪ್ರಸನ್ನವಾಯ್ತು. ಈ ಪವಿತ್ರವಾದ ವಾತಾವರಣದಲ್ಲಿ ಯದುಪತಿ ಸಂಗೀತಸೇವೆಗೆ ಈ ಕೆಳಗಿನ ಹಾಡನ್ನು ಹಾಡಿದನು.

ರಾಗ—ಧನ್ಯಾಸಿ.

ಬದುಕು ಬದುಕೆಲೊ ಜೀವ, ಬಂಟನಾಗಿ
ಹುದುಗಿದ್ದ ಶಕ್ತಿಯನು ಹೊರಹೊಮ್ಮಿಸಿ || ಪಲ್ಲವಿ ||

ಎಂತೊ ಏನೋ ಬಾಳಿ ಸಾವಿನೊಳೆ ಕೊನೆಗೆ ವಿ-
ಶ್ರಾಂತಿಯೆಂದಿದ್ದೊಡೀ ನರಜನ್ಮವೇಕೋ ? ||
ಭ್ರಾಂತಿಯಿಂದಿಂತು ಮುರುಟುವುದೆ ? ಅದ್ಭುತವು ನಿ-
ನ್ನಂತರಂಗದ ಶಕ್ತಿ ! ಕಣ್ದೆರೆಯೊ, ನೋಡೋ ! || ೧ ||

ಜಗವನೇ ತೂಗುವ ಮಹಾಶಕ್ತಿ ನಿನ್ನದಿರೆ,
ನಗಿಸಿಕೊಳ್ಳುವುದೇಕೊ ದೀನನಾಗಿ ? ||
ನಗುತೆ, ನಗಿಸುತೆ, ಲೋಕವನು ಬೆಳಗು ನಲ್ಬಾಳ
ಹೊಗರಿನಿಂದಾತ್ಮಶಕ್ತಿಯನು ತೋರು ! || ೨ ||

ಕರಗುವುದಲೇ ಆತ್ಮಶಕ್ತಿಯಿದಿರೊಳು ವಜ್ರ-
ಗಿರಿ, ಮಹಾಸಾಗರವು ಗೋಷ್ಪದವಲೇ ! ||
ತಿರುಗದಿರು ಸಮರಶಿರದಿಂದೆ ! ಹೋರಾಡು ! ತಂ-
ದಿರುವಳದೊ ಜಯಮಾಲೆಯನು ಜಯಶ್ರೀ ! || ೩ ||

ಗುರುವಿನ ಶಿಷ್ಯವಾತ್ಸಲ್ಯವು ಮತ್ತು ಶಿಷ್ಯನ ಗುರುಭಕ್ತಿ ಮತ್ತು ಗುರು-ಶಿಷ್ಯರ ಮಾನವ ಜೀವನದ ಮಹತಿಯ ಪ್ರತೀತಿ ಇವು ಯದುಪತಿಯ ಸಂಗೀತದಲ್ಲಿ ರೂಪುಗೊಂಡಿವೆ ಎಂಬಂತೆ ಶ್ರೋತೃವೃಂದಕ್ಕೆ ತೋರಿತು. ಸಂಗೀತದಲ್ಲಿ ನೈಮಿತ್ತಿಕ ಆಚಾರ್ಯರ ಚಿತ್ತವು ಜಯಶ್ರೀಯ ಪಾದಾರವಿಂದದಲ್ಲಿ ಲೀನವಾಗಿದ್ದಿತು. "ಧನ್ಯಾಸಿ ರಾಗದ ಅಭಿಮಾನ ದೇವತೆಯೆ, ನೀನು ಇಂದು ಧನ್ಯೆ, धन्यासि । धन्यासि" ಎಂದರು ಪುರುಷೋತ್ತಮರಾಯರು. "ಧನ್ಯಾಸಿ ರಾಗದ ಮೋಹಕತೆ ಇಷ್ಟೊಂದು ಇರುವುದೇ ?" ಎಂದರು ಡಾ. ಶ್ಯಾಮ

ರಾಯರು "ಏನು ಸಂಗೀತ ನೈಪುಣ್ಯವಿದು!" ಎಂದರು ಶೇಷಗಿರಿರಾಯರು. "ಯದುಪತಿ, ನೀನು ನಿಜವಾಗಿಯೂ ಒಂದು ರತ್ನವು!" ಎಂದರು ಭಟ್ಟರು. "ಸಂಗೀತಾಚಾರ್ಯರಾದ ಗುರುಗಳಿಗೆ ತಕ್ಕ ಶಿಷ್ಯನು!" ಎಂದನು ಬೀರಣ್ಣನು. "ನನ್ನ ಮಗನೇ!" ಎಂದಳು ಸಾವಕ್ಕನು. "ಈತನ ಹೃದಯದ ಆಳವು ಇಷ್ಟೆಂದು ಇರುವುದಲ್ಲವೇ!" ಎಂದನು ಕಮಲಾಕ್ಷನು. "ಮಾಧುರ್ಯದ ಮೂರ್ತಿ ಇವರು!" ಎಂದಳು ಮಾಧವಿ.

ಶೇಷಗಿರಿರಾಯರಿಗಾಗಲಿ ಶಾರದಾಬಾಯಿಗಾಗಲಿ ಆಚಾರ್ಯರ ಜನರಲ್ಲಿ ಬೆರೆತು ಒಂದಾಗಲು ಬಹಳ ಹೊತ್ತು ಬೇಕಾಗಲಿಲ್ಲ. ಎಲ್ಲರೂ ಅವರನ್ನು ಅಂತಃಕರಣಪೂರ್ವಕವಾಗಿ ಸ್ವಾಗತಿಸಿದರು. ದರ್ಪವು ಮತ್ತು ದುರಭಿಮಾನವು ಮಾನವ ಮಾನವರ ಮಿಲನಕ್ಕೆ ಮಹಾ ವ್ಯತ್ಯಯಗಳು. ಈ ಭಾವನೆಗಳಿಗೆ ಆಚಾರ್ಯರಲ್ಲಿ ಅಥವಾ ಆಚಾರ್ಯರ ಸ್ನೇಹಿತರಲ್ಲಿ ಅವಕಾಶವಿರಲಿಲ್ಲ. ಪಶ್ಚಾತ್ತಾಪದಿಂದ ಪುನೀತರಾದ ಈ ದಂಪತಿಗಳ ವಿಷಯದಲ್ಲಿ ಅವರೆಲ್ಲರ ಪ್ರೇಮವು ಅವ್ಯಾಜ್ಯವಾಗಿತ್ತು. ಪ್ರೇಮವು ಅವ್ಯಾಜವಾಗಿರುವಲ್ಲಿ ಹೃದಯಹೃದಯಗಳು ಕೂಡಿಕೊಳ್ಳಲು ಹೊತ್ತು ಹಿಡಿವುದಿಲ್ಲ. ಡಾಕ್ಟರರ ಹೆಂಡತಿ ರಮಾಬಾಯಿ ಮೊದಲಿನಿಂದ ಶಾರದಾಬಾಯಿಗೆ ಗುರ್ತಿನವರು. ಉಳಿದ ಮೂವರ—ರಾಧಮ್ಮನವರು, ಲಕ್ಷ್ಮೀಬಾಯಿ ಮತ್ತು ಸಾವಕ್ಕ ಇವರ—ಪರಿಚಯವು ಅವರಿಗೆ ಈ ಮೊದಲು ಇರಲಿಲ್ಲ ಆದರೆ ಅವರ ಬಿಚ್ಚು ಮನಸ್ಸು ಮತ್ತು ಉದಾರವೃತ್ತಿ ಶಾರದಾಬಾಯಿಯ ಅಂತಃಕರಣವನ್ನು ಸ್ವಲ್ಪ ವೇಳೆಯಲ್ಲಿ ಸೆರೆಗೊಂಡುವು. ಅಕ್ಕತಂಗಿಯರ ಮಧ್ಯದಲ್ಲಿ ಇರುವೆನೆಂಬಂತೆ ಅವರಿಗೆ ಎನಿಸಿತು. ಎಲ್ಲ ಕಲಸಗಳಲ್ಲಿಯೂ ಅಂದು ಅವರ ಅಂಗವಿದ್ದಿತು. ಕಸಗೂಡಿಸುವುದು, ಎಂಜಲು ಬಳಿವುದು ಮೊದಲಾದ ಯಾವ ಕೆಲಸವೂ ಅವರಿಗೆ ಕಡಿಮೆಯದಾಗಿ ತೋರಲಿಲ್ಲ. ಒಂದು ವಿಲಕ್ಷಣವಾದ ಆನಂದವನ್ನು ಅವರು ಅಂದು ಅನುಭವಿಸಿದರು. ಸಮಾನಭಾವದಿಂದ ಇತರರಲ್ಲಿ ಕೂಡಿಕೊಂಡು ಕೆಲಸಮಾಡುವುದರಿಂದ ಅಂತಃಕರಣವು ವಿಕಾಸಗೊಳ್ಳುವುದೆಂಬುದು ಸುಳ್ಳಲ್ಲ. ಈ ವರೆಗಿದ್ದ ಶಾರದಾಬಾಯಿಯ ಅಹಂಭಾವದ ಒತ್ತಡವು ಆಚಾರ್ಯರಲ್ಲಿಯ ಶುದ್ಧ ಪ್ರೇಮದ ಒತ್ತಡದಲ್ಲಿ ಅವರಿಗೆ ಗೊತ್ತಾಗದಂತೆ ಹೋಗಿ ಬಿಟ್ಟಿದ್ದಿತು. ಅಹಂಭಾವದ ಒತ್ತಡವು ಅಳಿದಂತೆ ಅವರ ಅಂತಃಕರಣವು ಅರಳಿತು. ಹಸನ್ಮುಖಿ

ಯಾಗಿ ಆನಂದದಿಂದಲೂ ಪ್ರೇಮದಿಂದಲೂ ಅವರು ಅಂದು ಉಳಿದವರೊಡನೆ ಕೆಲಸಮಾಡಿದರು. ಹೀಗಿರುವುದೇ ಸ್ವಾಭಾವಿಕವಾದ ಜೀವನವೆಂದು ಅವರಿಗೆ ಅಂದು ತೋರಿತು. ಕಮಲಾಕ್ಷನು ತನ್ನ ತಾಯಿಯ ಅಂದಿನ ವೃತ್ತಿಯನ್ನು ಕಂಡು ಹಿರಿಹಿರಿ ಹಿಗ್ಗಿದನು. "ನನ್ನ ತಾಯಿ ನಿಜವಾಗಿ ಹೀಗಿರುವಳಲ್ಲವೆ ?" ಎಂದನು ಅವನು.

ಜೀವವು ತಾನು ಯಾವ ಜನ್ಮದಲ್ಲಿಯೆ ಇರಲಿ, ಯಾವ ಸ್ಥಿತಿಯಲ್ಲಿಯೇ ಇರಲಿ, ತನ್ನ ಸ್ವರೂಪವನ್ನು ತಿಳಿಯಲು ಅದು ನಿರಂತರವೂ ಯತ್ನಿಸುತ್ತಿರುತ್ತದೆ. ತಾನು ಹೀಗೆ ಯತ್ನಿಸುತ್ತಿದ್ದುದು ಅದಕ್ಕೆ ಗೊತ್ತಿರಲಿಕ್ಕಿಲ್ಲ, ಆದರೆ ಯತ್ನಿಸುತ್ತಿರುವುದು ಸುಳ್ಳಲ್ಲ. ತಾನಿದ್ದ ಸ್ಥಿತಿಗಿಂತ ಹೆಚ್ಚು ಒಳಿತಾದ ಸ್ಥಿತಿಯನ್ನು ಪಡೆಯಲು ಅದು ಯಾವಾಗಲೂ ಹವಣಿಸುತ್ತಿರುವುದೆಂಬುದು ನಾವು ಮೇಲೆ ಹೇಳಿದ ಮಾತಿಗೆ ನಿದರ್ಶನವು. ಜೀವದ ಪ್ರಯತ್ನವು ಸರಿಯಾದ ದಾರಿಯಲ್ಲಿದ್ದರೆ ತನ್ನ ಸ್ವರೂಪದ ಅರಿವು ಅದಕ್ಕೆ ಆ ಪ್ರಯತ್ನದ ಉತ್ಕಟತೆಗೆ ತಕ್ಕ ಪ್ರಮಾಣದಲ್ಲಿ ಆಗುವುದು, ಮತ್ತು ಅರಿವಿನ ಪ್ರಮಾಣಕ್ಕೆ ತಕ್ಕ ಸಾತ್ತ್ವಿಕ ಆನಂದವು ಅದಕ್ಕೆ ದೊರೆವುದು. ಈ ಬಗೆಯ ಆನಂದವನ್ನು ಅಂದು ಶೇಷಗಿರಿರಾಯರು ಮತ್ತು ಶಾರದಾಬಾಯಿ ಆಚಾರ್ಯರಲ್ಲಿ ಅನುಭವಿಸಿದರು. ಆಚಾರ್ಯರು ಇದನ್ನು ಅರಿತು ಮನಸ್ಸಿನಲ್ಲಿ ನಲಿದರು.

ಊಟ-ಕೆಲಸಗಳು ಮುಗಿದುವು. ಅತಿಥಿಗಳು ಉಲ್ಲಸಿತ ಹೃದಯರಾಗಿ ಆಚಾರ್ಯರ ಅನುಜ್ಞೆಯನ್ನು ಪಡೆದು ತಮ್ಮ ತಮ್ಮ ಮನೆಗೆ ತೆರಳಿದರು.



ಪುಸ್ತಕಗಳು ದೊರೆವ ಸ್ಥಳ:

ಸಾಲಿ ರಾಮಚಂದ್ರರಾಯರು
ಶ್ರೀನಿಕೇತನ
ಸಪ್ತಾಪುರ, ಧಾರವಾಡ

ಕರ್ನಾಟಕ ಪ್ರಾಗತಿಕ ಶಿಕ್ಷಣ ಸಂಘ
೯೪, ಶಿವಾಜಿ ಪಾರ್ಕ, ದಾದರ
ಮುಂಬಯಿ ೨೮.